# ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ

1948

ಸಂಪಾದಕರು

ಚ. ಸುಂದರೇಶನ್, ಎಂ. ಎ.,





ಭಗವಾನ್ ಶ್ರೀ ಸಿದ್ಧಲಿಂಗೇಶ್ವರ ಪಂಚಶತಮಾನೋತ್ಸವ ಸಮಿತಿ

೧೮, ಜಯದೇವ ವಿದ್ಯಾರ್ಥಿನಿಲಯ – ಶೇಷಾದ್ರಿರಸ್ತೆ,

ಬೆಂಗಳೂರು – ೫೬೦೦೦೯.

# ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ

( ಪರಿಶೋಧನೆ )


ಸಂಪಾದಕರು

ಶ್ರೀ ಚ. ಸುಂದರೇಶನ್, ಎಂ. ಎ.,



ಪ್ರಕಾಶಕರು

ಶ್ರೀ ಹೆಚ್. ಆರ್. ಮಹಾಂತಯ್ಯ, ಬಿ. ಎ., ಆನರ್ಸ್, ಎಲ್ ಎಲ್. ಬಿ.

(ವಿಶ್ರಾಂತ ನ್ಯಾಯಾಧೀಶರು) ಪ್ರಧಾನ ಕಾರ್ಯದರ್ಶಿ

ಭಗವಾನ್ ಶ್ರೀ ಸಿದ್ಧಲಿಂಗೇಶ್ವರ ಪಂಚಶತಮಾನೋತ್ಸವ ಸಮಿತಿ.

೧೮, ಜಯದೇವ ವಿದ್ಯಾರ್ಥಿನಿಲಯ – ಶೇಷಾದ್ರಿರಸ್ತೆ,

ಬೆಂಗಳೂರು – ೫೬೦೦೦೯.

# SRI SIDDHALINGESHWARA STOTRA SAHITYA

Editor: Sri C. SUNDARESHAN, M.A.,
Lecturer in Kannada,
Govt Arts College, Bangalore.



*

Publisher: Sri H. R. MAHANTIA, B.A. (Hons), LL.B.
(District & Sessions Judge-Rtd.)
Vice - Chairman
The Committee of Management
Sri Siddhalingeshwara Swamy Shrine
Yedeyur, Kunigal Taluk, Tumkur District
&
General Secretary
Yedeyur Sri Siddhalingeshwara Swamy
5th Centenary Celebrations Committee
18, Jayadeva Hostel, Sheshadri Road, Bangalore-9

FIRST Impression — 1973
2000 Copies

PRICE:
Ordinary Copy Rs. 4-50
Library Edition Rs. 6-50



Printers:
Govardhan Printers Sunkalpet — Bangalore-2

# ಮುನ್ನುಡಿ

ಧ್ಯಾನ, ಸ್ತೋತ್ರ, ಸಂಕೀರ್ತನೆ–ಹೀಗೆ ಮುಖ್ಯವಾಗಿ ತ್ರಿವಿಧದಲ್ಲಿ ಪ್ರವಹಿಸುತ್ತದೆ ಭಕ್ತನಾದವನ ಅಂತರಂಗ, ತಾನು ಒಪ್ಪಿಕೊಂಡ ದೈವದ ಅಥವಾ ಗುರುವಿನ ಕಡೆಗೆ. ಧ್ಯಾನ–ವ್ಯಕ್ತಿಯಾದವನು ಏಕಾಂತದಲ್ಲಿ ಅದೂ ಅಂತರಂಗದಲ್ಲಿ, ಬಹುಮಟ್ಟಿಗೆ ನಿಶ್ಶಬ್ದ ಮಾರ್ಗದಲ್ಲಿ, ಇಷ್ಟದೈವದ ನೆನಹಿನಲ್ಲಿ ಕರಗಿ ನಿಲ್ಲುವ ಕ್ರಿಯೆ. ಅದು ಹೊರಜಗತ್ತಿಗೆ ಕಾಣುವಂಥದಲ್ಲ. ಸ್ತೋತ್ರ–ತನ್ನ ಗುರು ಅಥವಾ ದೈವದ ಮಹತ್ತಿನಿಂದ ಸ್ಫೂರ್ತವಾಗಿ, ಅದರ ಗುಣ–ಮಹಿಮಾವಿಶೇಷಗಳನ್ನು ಪ್ರಶಂಸಿಸುವುದರ ಮೂಲಕ, ತನ್ನ ಅಂತರಂಗದ ಆಶಯಗಳನ್ನು ತೋಡಿಕೊಳ್ಳುತ್ತಾ, ದೈವದ ಕೃಪೆಯನ್ನು ಯಾಚಿಸುತ್ತಾ ವಿನಯವನ್ನು ಸಾಧಿಸುವ ಒಂದು ವಿಧಾನ. ಸಂಕೀರ್ತನೆ – ಸ್ತೋತ್ರದ ಮುಂದುವರಿದ ರೂಪ. ತಾನು ಮತ್ತು ತನ್ನಂಥವರು ಜತೆಗೂಡಿ, ಒಂಟಿಯಾಗಿ ಅಥವಾ ಸಾಮೂಹಿಕವಾಗಿ ತನ್ನ ಭಕ್ತಿಭಾವಗಳನ್ನು ಪ್ರಕಟಿಸಲು ಅನುಕೂಲವಾದ ಇನ್ನೊಂದು ಪ್ರಾರ್ಥನಾರೂಪ. ಒಟ್ಟಿನಲ್ಲಿ ಭಕ್ತನಾದವನ ಮನಸ್ಸು, ಪರಮವಾದದ್ದರ ಎಚ್ಚರದಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ನಿಲ್ಲಲು ಮಾಡಿಕೊಂಡ ವಿಧಾನಗಳು ಇವು.

ಶ್ರೀ ಚ. ಸುಂದರೇಶನ್ ಅವರು ಸಂಪಾದಿಸಿ ಪ್ರಕಟಿಸುತ್ತಿರುವ 'ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ' ಎಡೆಯೂರು ಶ್ರೀ ಸಿದ್ಧಲಿಂಗಯತಿಗಳನ್ನು ಕುರಿತು ಅನೇಕ ಚೇತನಗಳು ಕಟ್ಟಿದ ಸ್ತೋತ್ರಗಳ ಸಂಗ್ರಹ. ವೀರಶೈವಧರ್ಮದ ಇತಿಹಾಸದಲ್ಲಿ ಶ್ರೀ ಸಿದ್ಧಲಿಂಗಯತಿಗಳದು ಬಹು ದೊಡ್ಡ ಹೆಸರು. ಬಸವಾದಿಗಳ ನಂತರ, ಅದೇ ಶರಣಪರಂಪರೆಯನ್ನು ದಕ್ಷಿಣ ಕರ್ನಾಟಕದಲ್ಲಿ ಸುಸಮರ್ಥವಾಗಿ ಮುಂದುವರಿಸಿ, ಧರ್ಮಪ್ರಸಾರದ ಹಾಗೂ ವಚನವಾಙ್ಮಯ ಪುನರುಜ್ಜೀವನದ ಸ್ಫೂರ್ತಿಕೇಂದ್ರವಾದ ಎಡೆಯೂರು ಸಿದ್ಧಲಿಂಗಯತಿಗಳ ವ್ಯಕ್ತಿತ್ವಕ್ಕೆ ಎತ್ತಿದ ಭಕ್ತಿಯ ಹಣತೆಗಳಂತಿವೆ ಈ ಸ್ತೋತ್ರಗಳು. ಸಂಸ್ಕೃತದಲ್ಲಿ ಮತ್ತು ಕನ್ನಡದಲ್ಲಿ, ಅನೇಕ ಪ್ರಕಾರಗಳಲ್ಲಿ ಸಿದ್ಧಲಿಂಗೇಶ್ವರರನ್ನು ಕುರಿತು ಭಾವುಕರಾದ ವಿದ್ವಾಂಸರು, ಕವಿಗಳು, ಅಂದಿನಿಂದ ಇಂದುವರೆಗೆ ಹಾಡಿಕೊಂಡ, ತೋಡಿಕೊಂಡ ಸ್ತೋತ್ರಗಳನ್ನು ಆಯ್ದು ಮಾಲೆ ಮಾಡಿ ಸುಂದರೇಶನ್ ಅವರು ಶ್ರೀ ಸಿದ್ಧಲಿಂಗಯತಿಗಳ ಚರಣಕ್ಕೆ ಅರ್ಪಿಸಿದ್ದಾರೆ.

ಶ್ರೀ ಸುಂದರೇಶನ್ ಅವರು ಆಗಲೇ ಈ ದಿಕ್ಕಿನಲ್ಲಿ ತಕ್ಕಷ್ಟು ಕೆಲಸ ಮಾಡಿದ್ದಾರೆ. ಪ್ರಸ್ತುತ 'ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ' ವನ್ನು ಅವರು ಸಂಪಾದಿಸಿ ಸಿದ್ಧಪಡಿಸಿರುವ ರೀತಿಯಲ್ಲಿ ಅವರ ಶ್ರಮ ಹಾಗೂ ಶ್ರದ್ಧೆ ಎದ್ದು ಕಾಣುತ್ತಿವೆ. ಎಲ್ಲೆಲ್ಲೋ ಚದುರಿ ಹೋಗಿದ್ದ ಸ್ತೋತ್ರಗಳನ್ನು ಸಂಗ್ರಹಿಸಿ, ಅನುಕ್ರಮವಾಗಿ ವ್ಯವಸ್ಥೆಗೊಳಿಸಿರುವ ರೀತಿ, ಸ್ತೋತ್ರಗಳಿಗೆ ಪ್ರೇರಣೆ ನೀಡಿರಬಹುದಾದ ಶರಣರ ವಚನಗಳನ್ನು ಅಲ್ಲಲ್ಲಿ ಅಡಿಟಿಪ್ಪಣಿಗಳಲ್ಲಿ ಸೂಚಿಸಿರುವುದರ ಔಚಿತ್ಯ, ಸ್ತೋತ್ರಸಾಹಿತ್ಯವನ್ನು ಕುರಿತು ಬರೆದಿರುವ ಉಪಯುಕ್ತವಾದ ಮುನ್ನುಡಿ, ಕವಿ–ಕೃತಿಗಳ ಬಗೆಗೆ ಸಿದ್ಧಪಡಿಸಿರುವ ಟಿಪ್ಪಣಿಗಳು, ಅನುಬಂಧರೂಪವಾಗಿ ಅವರು ಕೊಟ್ಟಿರುವ ಅರ್ಥಕೋಶ ಇತ್ಯಾದಿಗಳು– ಶ್ರೀ ಸುಂದರೇಶನ್ ಅವರು ಸಂಪಾದನಾಕಾರ್ಯವನ್ನು ಎಷ್ಟು ಅಚ್ಚುಕಟ್ಟಾಗಿ ಮಾಡಬಲ್ಲರೆಂಬುದಕ್ಕೆ ಸಾಕ್ಷಿಯಾಗಿವೆ.

ಸ್ತೋತ್ರಗಳನ್ನು ಸಾಹಿತ್ಯ ಎಂದು ಕರೆಯಬೇಕೆ–ಎಂಬ ಒಂದು ಪ್ರಶ್ನೆಯಿದೆ. ಸಂಸ್ಕೃತದಲ್ಲಿ ಸ್ತೋತ್ರಸಾಹಿತ್ಯದ್ದೇ ಒಂದು ಪರಂಪರೆಯಿದೆ. ಕನ್ನಡದಲ್ಲೂ ಇಂಥದೊಂದು ಪರಂಪರೆಯನ್ನು ಗುರುತಿಸಲು ಸಾಧ್ಯವಿದೆ ಎಂಬುದನ್ನು ಶ್ರೀ ಸುಂದರೇಶನ್ ಅವರು ಸೂಚಿಸಿದ್ದಾರೆ. ಆದರೆ ಸ್ತೋತ್ರದಲ್ಲಿ ತಲ್ಲೀನವಾಗುವ ಮನಸ್ಸು, ನಾವು ಯಾವುದನ್ನು ಸಾಹಿತ್ಯ ಎಂದು ರೂಢಿಯ ಅರ್ಥದಲ್ಲಿ ಪರಿಗಣಿಸುತ್ತೇವೆಯೋ, ಅದರ ಉಪಾಧಿಯಿಂದ ಆಚೆಯ ನೆಲೆಯಲ್ಲಿ ವ್ಯವಹರಿಸುತ್ತದೆ. ಅದರ ಉದ್ದೇಶ ಸಾಹಿತ್ಯನಿರ್ಮಿತಿಯಂತೂ ಅಲ್ಲವೇ ಅಲ್ಲ; ಅದರ ಉದ್ದೇಶ ತನ್ನ ಇಷ್ಟದೈವದೊಂದಿಗೆ ಸಾಧ್ಯವಾದಷ್ಟು ಉಪಾಯಗಳ ಮೂಲಕ ಬೆರೆಯುವುದು. ಹಾಗೆ ಬೆರೆಯುವಲ್ಲಿ ಈ ವ್ಯಕ್ತಿತ್ವ ತನ್ನ ದೈವದೊಂದಿಗೆ ತಾನೇ ಮಾತನಾಡಿಕೊಂಡ, ಹಾಡಿಕೊಂಡ, ತೋಡಿಕೊಂಡ ಭಾವನೆಗಳಿಗೆ ಒಂದು ಲಿಖಿತರೂಪವನ್ನು ಕೊಟ್ಟುಕೊಳ್ಳುವುದು ತನ್ನ ಹಾಗೂ ತನ್ನಂಥವರ 'ಆಧ್ಯಾತ್ಮಿಕ ಪ್ರಯೋಜನ' ಕ್ಕಾಗಿ. ಆದರೆ ಇಂಥ ಅಭಿವ್ಯಕ್ತಿಗಳಲ್ಲಿ ಸಾಹಿತ್ಯಾಂಶವಿದೆ ಎಂದು ಗುರುತಿಸುವುದು, ಸಾಹಿತ್ಯಕ್ಕೂ ಇವು ಕೊಡುಗೆಯಾಗುತ್ತವೆ ಎಂದುಕೊಳ್ಳುವುದು, ಸಾಹಿತ್ಯದ ನೆಲೆಯಲ್ಲಿ ವ್ಯವಹರಿಸುವ ನಮ್ಮಂಥವರಿಗೆ ಸಂಬಂಧಪಟ್ಟ ವಿಚಾರ. ಶಂಕರಾಚಾರ್ಯರಂಥವರು ರಚಿಸಿದ ಸಂಸ್ಕೃತ ಸ್ತೋತ್ರಗಳಲ್ಲಿ, ಕನ್ನಡದ ಎಷ್ಟೋ ಶತಕ, ವಚನ, ಕೀರ್ತನೆಗಳಲ್ಲಿ ಸಾಹಿತ್ಯಾಂಶವಿದೆ ಎಂಬುದೇನೋ ನಿಜವೆ. ಆದರೂ ಅವುಗಳನ್ನು ಸಾಹಿತ್ಯ ಎಂದು ಕರೆಯುವುದು ಔಪಚಾರಿಕ. ಮುಖ್ಯವಾದ ಮಾತೆಂದರೆ, ಈ ಸ್ತೋತ್ರಗಳು ಒಂದು ಅನುಭಾವಿಕ ಪರಂಪರೆಯನ್ನು ಮುಂದುವರಿಸಿಕೊಂಡು ಬರುವುದರಲ್ಲಿ ಮತ್ತು ಭಕ್ತರಾದವರ

ಅಮೂರ್ತವಾದ ಭಾವನೆಗಳಿಗೆ, ಒಂದು ಸಿದ್ಧವಾದ ಮೂರ್ತ ವಾಗ್ರೂಪವನ್ನು ಒದಗಿಸುವುದರಲ್ಲಿ ಸಫಲವಾಗಿವೆ ಎಂಬುದು.

ಶ್ರೀ ಸಿದ್ಧಲಿಂಗಯತಿಗಳ ಐದನೆಯ ಶತಮಾನೋತ್ಸವದ ಸಂದರ್ಭದಲ್ಲಿ ಅವರನ್ನು ಕುರಿತ ಸ್ತೋತ್ರಗಳನ್ನು ಹೀಗೆ ಸಂಪಾದಿಸಿ, ಶ್ರದ್ಧೆಯಿಂದ ತಮ್ಮ ವಿದ್ವತ್ ಕೈಂಕರ್ಯವನ್ನು ಸಲ್ಲಿಸುತ್ತಿರುವ ಶ್ರೀ ಚ. ಸುಂದರೇಶನ್ ಅವರನ್ನು ನಾನು ಅಭಿನಂದಿಸುತ್ತೇನೆ.

೨೫ – ೨ – ೭೩ ಡಾ॥ ಜಿ. ಎಸ್. ಶಿವರುದ್ರಪ್ಪ, ಎಂ. ಎ., ಪಿ ಎಚ್. ಡಿ.

ನಿರ್ದೇಶಕರು
ಕನ್ನಡ ಅಧ್ಯಯನಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

# ಶುಭಾಶೀರ್ವಾದ

ಆತ್ಮೀಯರರೂ ಸತ್ವಪೂರ್ಣ ಸಾಹಿತಿಗಳೂ ಆದ ಶ್ರೀ ಚ. ಸುಂದರೇಶನ್, ಎಂ. ಎ., ಅವರು ಸಂಪಾದಿಸಿರುವ ನೂತನ ಗ್ರಂಥವಾದ 'ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ' ವನ್ನು ಓದಿ ಸಂತಸಗೊಂಡಿದ್ದೇವೆ. ತೋಂಟದ ಸಿದ್ಧಲಿಂಗಯತಿಗಳನ್ನು ಅಧಿಕರಿಸಿದ ಸಂಸ್ಕೃತ, ಕನ್ನಡ ಸ್ತೋತ್ರಕದಂಬವಿದು. ಸಂಸ್ಕೃತ ವಿಭಾಗದಲ್ಲಿ ಮುಕ್ತಕ, ಪಂಚಕ, ಅಷ್ಟಕ, ನಕ್ಷತ್ರಮಾಲಿಕೆ, ಸುಪ್ರಭಾತ, ಅಷ್ಟೋತ್ತರ ಶತಮಾಲೆ – ಇವಿದ್ದರೆ, ಕನ್ನಡ ವಿಭಾಗದಲ್ಲಿ ಹಳೆ – ಹೊಸಕವಿಗಳಿಂದ ರಚಿತವಾದ ರಗಳೆ, ಷಟ್ಪದಿ, ವಚನ, ಕಂದ, ಗೀತ, ವೃತ್ತ, ತ್ರಿವಿಧಿ, ನಾಮಾವಳಿ, ಮಂಗಳ ಮೊದಲಾದವುಗಳಿವೆ.

ಇವೆಲ್ಲವೂ ತೋಂಟದಾರ್ಯರನ್ನು ಬಳಸಿ ಬಂದ, ಹೊಗಳಿ ನಿಂದ ಹಾಡುಗಳಾಗಿವೆ. ಹಲವಾರು ಜನರ ಹೃದಯ ತುಂಬಿದ ಹಾಡುಗಳಿಗೆ ಕಾರಣರಾದ ತೋಂಟದ ಸಿದ್ಧಲಿಂಗಯತಿಗಳ ಕಾರಣಿಕತೆಗೆ ಬೇರೆ ಕಾರಣಗಳನ್ನು ಬೆದಕಿ ಕೆದಕಿ ಕಾಣಬೇಕಾಗಿಲ್ಲ.

ಕನ್ನಡ ಶರಣಮಾರ್ಗದಲ್ಲಿ ವಿರಕ್ತಪಥದಲ್ಲಿ ವಚನರಚನೆಯಲ್ಲಿ ಕ್ರಾಂತಿ–ಕಾಂತಿಗಳಲ್ಲಿ ಪ್ರಭುದೇವರ ಬಳಿಕ, ಪ್ರಮುಖವಾಗಿ ಕಾಣಿಸಿಕೊಳ್ಳುವವರು ಶ್ರೀ ತೋಂಟದ ಯತಿವರರು. ಇವರು ಸಾಮಾಜಿಕ ಶ್ರೇಷ್ಠವ್ಯಕ್ತಿಗಳಾಗಿರುವಂತೆ, ಗರಿಷ್ಠಶಕ್ತಿಯಾಗಿರುವಂತೆ, ವಚನರಚನೆಯಿಂದ ಕನ್ನಡ ಸಾರಸ್ವತಪ್ರಪಂಚಕ್ಕೂ, ತಾತ್ವಿಕ ತೇಜ ಓಜಗಳಿಂದ ಕನ್ನಡನಾಡಿಗೂ ದೀಪ್ತಿಯಾಗಿ ಬೆಳಗಿದ್ದಾರೆ. ಅಂತೆಯೇ ಅವರು ಕವಿ–ಶರಣ ಜನರ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಭಕ್ತರ ಆರಾಧನೆಗೆ ಅರ್ಹರಾಗಿದ್ದಾರೆ.

ಶ್ರೀ ಸಿದ್ಧಲಿಂಗೇಶ್ವರರನ್ನು ಕುರಿತ ಸ್ತೋತ್ರಗಳು ಒಂದೆಡೆಗೆ ನಮಗೆ ದೊರಕುತ್ತಿರಲಿಲ್ಲ. ಶ್ರೀ ಚ. ಸುಂದರೇಶನ್ ಅವರು ಅಪಾರ ಪರಿಶ್ರಮ ವಹಿಸಿ ಅವುಗಳನ್ನೆಲ್ಲ ಸಂಗ್ರಹಿಸಿ, ಪರಿಷ್ಕರಿಸಿ ಕೊಟ್ಟಿರುತ್ತಾರೆ. ಈ ಸಂಪಾದನ ಕೃತಿ ಶ್ರೀ ಚ. ಸುಂದರೇಶನ್ ಅವರ ಶ್ರದ್ಧೆ, ಭಕ್ತಿ, ಸಾರಸ್ವತ ಆರಾಧನೆಯ ಸಂಕೇತ; ಸತತ ಅಧ್ಯಯನ, ಸಂಶೋಧನೆಯ ಫಲ. ಇದರಿಂದ ತೋಂಟದಾರ್ಯರನ್ನು ಸ್ತುತಿಸಿ ಕೃತಕೃತ್ಯರಾಗುವವರಿಗೆ ಮಾತ್ರವಲ್ಲ, ಸ್ತುತಿಕರ್ತರಿಗೂ, ಶ್ರಾವಕರು ಮತ್ತು ಜಿಜ್ಞಾಸುಗಳಿಗೂ ಒಂದೊಂದು ಬಗೆಯ ಲಾಭವಾಗಿದೆ. ಸಂಪಾದಕರು ಬರೆದಿರುವ ಪ್ರಸ್ತಾವನೆ, ಮತ್ತು ವಿಶೇಷ ಪರಿಶ್ರಮದಿಂದ ಅವರು ಸಿದ್ಧಪಡಿಸಿರುವ ಅನುಬಂಧ ಈ ಕೃತಿಗೆ ಕಳೆಯನ್ನು ತಂದು ಕೊಟ್ಟಿದೆ; ಜಿಜ್ಞಾಸುಗಳಿಗೆ ಅನುಕೂಲವಾಗಿದೆ.

'ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ'– ಇದೊಂದು ಇವರದೇ ಆದ ಹೊಸ ಹೊಲಬು. ಇವರ ಶ್ರಮ ಸಾರ್ಥಕವಾಗಿದೆ. ಶ್ರೀ ಚ. ಸುಂದರೇಶನ್ ಅವರ ಸತ್ಯ ಸುಂದರ ಶೈವೀಸಾಹಿತ್ಯಸೇವೆ ಸಂವರ್ಧನೆಗೊಳ್ಳಲಿ. ತೋಂಟದ ಯತಿವರರು ಸಂಪಾದಕರ ಬಾಳು – ಬದುಕನ್ನು ಸತ್ಕ್ರಿಯೆ, ಶಿವಜ್ಞಾನಗಳ ತೋಂಟವನ್ನಾಗಿಸಲೆಂದು ಹೃದಯಾರೆ ಹರಸೋಣವಾಗಿದೆ.

ಸೂರ್ಯಸಿಂಹಾಸನಾಧೀಶ್ವರ

ಡಾ॥ ಜ. ಚ. ನಿ. ಮಹಾಸನ್ನಿಧಿಗಳವರು

# ಅಭಿಪ್ರಾಯ

ಶ್ರೀಮಾನ್ ಚ. ಸುಂದರೇಶನ್, ಎಂ. ಎ., ಇವರು ಈಗಾಗಲೇ ದೃಷ್ಟಿಯೋಗ, ಅಭಿನವ ಅಲ್ಲಮ ಮೊದಲಾದ ಸದ್ಗ್ರಂಥಗಳನ್ನು ರಚಿಸಿ, ಪ್ರಕಟಿಸಿ ಕನ್ನಡಿಗರ ಆದರಕ್ಕೆ ಪಾತ್ರರಾಗಿರುವರು. ಇವರು ಕೇವಲ ಭಕ್ತಿವಶರಾಗಿ ತೋಂಟದ ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯದ ಸಂಪಾದನೆಯ ಕಾರ್ಯವನ್ನು ಮಾಡಿರುವರು. ಇದರಲ್ಲಿ ಅನೇಕ ಸಂಸ್ಕೃತ, ಕನ್ನಡ ಸ್ತೋತ್ರಗಳು ವಿವಿಧ ಛಂದೋರೂಪಗಳಿಂದ ರಚಿತವಾದವಿರುವವು. ಪೀಠಿಕೆಯಲ್ಲಿ ಸ್ತೋತ್ರ, ವ್ಯಾಖ್ಯೆ, ನಿರೂಪಣೆ, ಮೌಲ್ಯ – ಇವುಗಳ ಬಗೆಗೆ ವಿಸ್ತಾರವಾಗಿ ನಿರೂಪಿಸಿರುವರು ಮತ್ತು "ಬಸವೇಶ್ವರರನ್ನು ಕುರಿತ ಸ್ತುತಿಮುಕ್ತಾವಳಿಯನ್ನು ಬಿಟ್ಟರೆ ಅಷ್ಟರಮಟ್ಟಿಗೆ ವಿಪುಲವಾದ ಸ್ತೋತ್ರ ಸಾಹಿತ್ಯ ತೋಂಟದ ಸಿದ್ಧಲಿಂಗೇಶ್ವರರ ಬಗೆಗೆ ದೊರಕುತ್ತದೆ" – ಎಂದು ಶ್ರೀ ಸುಂದರೇಶನ್ ಅವರು ಬರೆದಿರುವುದು ಸತ್ಯ ಸಂಗತಿಯಾಗಿರುವುದು. ೧೨ನೆಯ ಶತಮಾನದ ಪ್ರಭುದೇವರೇ ೧೫ನೆಯ ಶತಮಾನದಲ್ಲಿ ಶ್ರೀ ಸಿದ್ಧಲಿಂಗೇಶ್ವರರೆಂಬ ನಾಮದಿಂದ ಅವತರಿಸಿರುವರೆಂಬ ನೆಗಳ್ತೆಯನ್ನು ಪಡೆದ ಆ ತೋಂಟದಾರ್ಯರ ಸ್ತೋತ್ರವನ್ನು ಹಿಂದಿನ ಇಂದಿನ ವೀರಶೈವ ಕವಿಗಳೆಲ್ಲರೂ ಅತ್ಯಂತ ಭಕ್ತಿಯಿಂದ ಮಾಡಿ ಧನ್ಯರಾಗಿರುವರು.

ಭಾರತೀಯರ ಆಸ್ತಿಕಮತಗಳಲ್ಲಿ ಪ್ರತಿಯೊಂದು ಮತದವರ ಗುರು ದೇವತಾದಿಯಾದ ಇಷ್ಟಮೂರ್ತಿಗಳ ಉಪಾಸನಾವಿಧಿಯು ತ್ರಿಕರಣಪೂರ್ವಕವಾಗಿ– ಎಂದರೆ ಕಾಯ – ವಚನ – ಮನಸ್ಸು – ಇವುಗಳ ಮೂಲಕವಾಗಿಯೇ ನಡೆಯಬೇಕು. ಕಾಯದಿಂದ ಅರ್ಚನ, ವಚನದಿಂದ ಜಪ – ಸ್ತೋತ್ರ, ಮನದಿಂದ ಧ್ಯಾನ – ಹೀಗೆ ತ್ರಿಕರಣಗಳಿಂದ ಮಾಡಿದ ಉಪಾಸನೆಯು ಪೂರ್ಣಗೊಳ್ಳುವುದು. ಇದು ಭಾರತೀಯರಲ್ಲಿ ಬಂದ ಪ್ರಾಚೀನ ಧಾರ್ಮಿಕ ಸಂಪ್ರದಾಯವಾಗಿರುವುದು. ಈ ಸಂಪ್ರದಾಯವನ್ನೆ ನೆನಪಿಗೆ ತಂದು ಕೊಡುತ್ತಿರುವ, ಭಕ್ತಿಯೇ ಮೈವೆತ್ತಂತಿರುವ ಹರಿಹರ ಮಹಾಕವಿಯು

"ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ"

ಎಂಬ ಪದ್ಯಭಾಗದಲ್ಲಿ ನೆನೆ – ಧ್ಯಾನಿಸು ಮನಸ್ಸಿನಲ್ಲಿ, ಪೊಗಳ್ – ಸ್ತೋತ್ರಮಾಡು ವಚನದಿಂದ, ಅರ್ಚಿಸು - ಕಾಯದ ಕೈಯಿಂದ ಪೂಜಿಸು – ಎಂದು ತ್ರಿಕರಣಪೂರ್ವಕವಾದ ಉಪಾಸನೆಯ ಸ್ವರೂಪವನ್ನೇ ವ್ಯಕ್ತಪಡಿಸಿರುವನು.

ಹೀಗೆ ವಿಧ್ಯುಕ್ತವಾಗಿ ಉಪಾಸನಾಭಾಗಕ್ಕೆ ಸೇರಿದ ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರ ಸಾಹಿತ್ಯದ ಮಹತ್ವವನ್ನು ಸಮುಚಿತವಾದ ರೀತಿಯಲ್ಲಿ ಈ ಸಂಪಾದಕರು ನಿರೂಪಿಸಿದ್ದಾರೆ. ತೋಂಟದ ಶ್ರೀ ಸಿದ್ಧಲಿಂಗೇಶ್ವರರ ಕೃಪಾಪಾತ್ರರಾಗಿರುವ ಶ್ರೀ ಚ. ಸುಂದರೇಶನ್ ಅವರ ಲೇಖನಕಾರ್ಯ ಸ್ತುತ್ಯವಾಗಿರುವುದು.

ದಿನಾಂಕ : ೧೮ – ೧ – ೭೩    ಆಸ್ಥಾನವಿದ್ವಾನ್, ಸರ್ವದರ್ಶನತೀರ್ಥ

ಬಳ್ಳಾರಿ    ಶ್ರೀ ವೈ. ನಾಗೇಶಶಾಸ್ತ್ರಿಗಳವರು.

Sri C. Sundareshan, M.A., is a devoted worker with a strong desire to go into the depth of any subject that he chooses to work on. His works like ಅಭಿನವ ಅಲ್ಲಮ, ಭಾವಚಿಂತಾರತ್ನ ವಿಮರ್ಶೆ, ಗೊಲ್ಗೊಥಾ – ವೈಶಾಖಿ ವಿಮರ್ಶೆ, ಭಾವಾರ್ಥವಿಸ್ತರಣ and ದೃಷ್ಟಿಯೋಗ form a veritable literary wealth and the last mentioned ದೃಷ್ಟಿಯೋಗ in particular remains a class by itself by its profundity in philosophical erudition and felicity in expression.

The present work, ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ is a pleasant anthology of the stotras, songs, Vachanas etc, in sanskrit and kannada in honour of Sri Thontada Siddhalingeshwara. Sri C. Sundareshan, as its Editor, has done a commendable job not only in collecting rare ones of them with deep devotion but in giving them the correct readings also with an eye of a research scholar.

His brief biographical note on the authors of each one of these selections and the epitome of its contents have undoubtedly enhanced the value of the work for the reader. Freedom from serious misprints is a matter of great importance and the editor has achieved this also creditably. Hence the book is sure to bring ample returns to the reader.

Dr. T. S. Krishnamurthy, M.A., Ph. d.,
Reader & Head of the Dept. of Sanskrit
Govt. Arts College, Bangalore.

# ಹರಕೆ

ದೇವರಲ್ಲಿ, ದೇವಪುರುಷರಲ್ಲಿ ಭಕ್ತಿಭಾವನೆಯನ್ನು ಉಳಿಸಿ, ಬೆಳಸುವುದಕ್ಕಾಗಿ ಕನ್ನಡನಾಡಿನಲ್ಲಿ ಹಾಡುಗಬ್ಬವು ಬಳಕೆಯಲ್ಲಿ ಬಂದಿದೆ. ಜನಸಾಮಾನ್ಯರ ಹೃದಯ ಹಸನಾಗಿ, ಭಾವಬೀಜವಂಕುರಿಸಿ, ಬೆಳೆದು ಹೆಮ್ಮರವಾಗಿ ಪಾರಮಾರ್ಥದ ತನಿವಣ್ಣು ಗಳನ್ನು ನೀಡುವ ಭಾಗ್ಯ ಹಾಡುಗಳಿಗಿದೆ.

ನೆರೆನಂಬಿದ ಭಕ್ತಕೋಟಿಗೆ ಅಭೀಷ್ಟವನ್ನು ನಿರಂತರವಾಗಿ ಕರುಣಿಸುತ್ತಿರುವ ಪರಮಗುರು ಶ್ರೀ ಎಡೆಯೂರ ಸಿದ್ಧಲಿಂಗೇಶ್ವರರ ಬಗೆಗೆ, ಆ ಮಹಿಮರ ಲೀಲೆಗಳ ಬಗೆಗೆ ಅನೇಕ ಪದ–ಪದ್ಯಗಳು ರಚಿತವಾಗಿವೆ.

'ಕೊಡದೊಳಗೆಷ್ಟು ನಿಲ್ವುದು ಸಮುದ್ರಜಲಂ' ಎಂಬಂತೆ ಶ್ರೀ ಸಿದ್ಧಲಿಂಗೇಶನೇ ಪರದೈವವೆಂದು ತಿಳಿದು, ತಮ್ಮ ತನು–ಮನ–ಧನವನಿತ್ತು ಸೇವೆಗೈಯ್ಯುತ್ತಿರುವ ಶ್ರೀ ಹೆಚ್. ಆರ್. ಮಹಾಂತಯ್ಯನವರು ಧನ್ಯರೆಂದೇ ಹೇಳಬೇಕು. ನನ್ನ ಪುಣ್ಯ ವಶದಿಂದ ಮೇಲ್ಕಂಡವರ ಮನದಲ್ಲಿ ನನ್ನ ಹರಕೆ ನುಡಿಯು ಬೇಕೆನಿಸಿದೆ. ಅವರ ಅಪೇಕ್ಷೆಯನ್ನು ಅನುಲಕ್ಷಿಸಿ ಪರಮಗುರುಸೇವೆಯೆಂದು ಈ ನಾಲ್ಕು ಮಾತು ಬರೆಯಲಾಗಿದೆ.

ನನ್ನ ಅರವತ್ತು ವರುಷಗಳ ಅನುಭವದಿಂದಲೂ ಶ್ರೀ ಎಡೆಯೂರ ಮಹಾ ಶಿವಯೋಗಿಯಲ್ಲಿ ಅಚ್ಚಳಿಯದ ಭಕ್ತಾನುಕಂಪವನ್ನು ಕಾಣುತ್ತಿದ್ದೇನೆ. ನಂಬಿದವರಿಗೆ ಇಂಬುಗೊಟ್ಟು ಸಲಹುವ ಆ ಮಹಿಮನ ಪವಿತ್ರ ಪಾದಧ್ಯಾನವೇ ನನಗೆ ದಾರಿ ತೋರುವ ನಂದಾದೀಪವಾಗಿದೆ.

ಇಂತಹ ಮಹಾಮಹಿಮರನ್ನು ಕುರಿತ ಈ ಗ್ರಂಥಕ್ಕೆ ಸೇವಾಭಾವನೆಯಿಂದ ನಾಲ್ಕು ಮಾತು ಬರೆದಿರುವೆನು. ಶ್ರೀ ಮಹಾಶಿವಯೋಗಿಯು ಸರ್ವರಿಗೂ ಭಕ್ತಿಯನ್ನಿತ್ತು ಎಂದೆಂದಿಗೂ ಪಾಲಿಸಲಿ.

— ಶ್ರೀ ನಿ. ಪ್ರ. ಬಸವಲಿಂಗಸ್ವಾಮಿಗಳವರು
ಗವಿಮಠ
ನವಿಲುಗುಂದ.

# ಪ್ರಕಾಶಕರ ಅರಿಕೆ

## ಶ್ರೀ ಕ್ಷೇತ್ರ ಎಡೆಯೂರು

ಭಗವಾನ್ ಸಿದ್ಧಲಿಂಗೇಶ್ವರರು ೧೫ನೇ ಶತಮಾನದಲ್ಲಿ ೭೦೦ ವಿರತರು ಮತ್ತು ೩೦೦೦ ಚರಮೂರ್ತಿಗಳೊಂದಿಗೆ, ಇಡೀ ಹಿಂದೂಸ್ಥಾನವನ್ನೆಲ್ಲ ಸಂಚರಿಸಿ, ಶರಣಧರ್ಮ ಪುನಃ ಪ್ರತಿಷ್ಠಾಪನೆಮಾಡಿ, ಕೊನೆಗೆ ಎಡೆಯೂರಿಗೆ ದಯಮಾಡಿಸಿ, ತಮ್ಮ ಪ್ರಮುಖ ಶಿಷ್ಯರಾದ ನಿರಕ್ಷರ ಬೋಳಬಸವಾರ್ಯರಿಗೆ ಷಟ್ಸ್ಥಲ ಪಟ್ಟವನ್ನು ಕಟ್ಟಿ, ಶೂನ್ಯ ಸಿಂಹಾಸನಾರೋಹಣ ಮಾಡಿಸಿ, ತಮ್ಮ ಮಣಿಹವು ಪೂರೈಸಿತೆಂಬ ತೃಪ್ತಿಯಿಂದ, ಸಮಸ್ತ ಭಕ್ತ–ಶಿಷ್ಯವೃಂದವು ಉಘೇ–ಎನ್ನುತ್ತಿರಲು, ನಿರ್ವಿಕಲ್ಪ ಶಿವಯೋಗ ಸಮಾಧಿಯಲ್ಲಿ ನೆಲಸಿ, ಇಂದಿಗೂ ಅಶೇಷ ಭಕ್ತಕೋಟಿಯನ್ನು ಉದ್ಧಾರ ಮಾಡುತ್ತಿರುವುದು ಸರ್ವ ವಿದಿತವಾಗಿದೆ.

ಅಂದಿನಿಂದ ಶ್ರೀಕ್ಷೇತ್ರದಲ್ಲಿ ತ್ರಿಕಾಲದಲ್ಲಿಯೂ ಶ್ರೀಸ್ವಾಮಿಯವರಿಗೆ ಅಸದೃಶ ಪೂಜಾಕೈಂಕರ್ಯಗಳು ವೈಭವದಿಂದ ನಡೆಯುತ್ತಿವೆ. ಪ್ರತಿವರ್ಷವೂ ಚೈತ್ರ ಶುದ್ಧ॥ ೭ ರಥೋತ್ಸವವು ಅತಿಸಂಭ್ರಮದಿಂದ ನಡೆಯುತ್ತ ಬಂದಿದೆ. ಕ್ಷೇತ್ರಾಭಿವೃದ್ಧಿಕಾರ್ಯಗಳೂ ನಿತ್ಯದಾಸೋಹವೂ ಅಭೂತಪೂರ್ವವಾಗಿ ನಡೆಯುತ್ತಿವೆ. ತಪ್ತಹೃದಯಗಳಿಗೆ ಅಮೃತ ಸೇಚನೆಯನ್ನು ನೀಡುವ ಶಾಂತಿಧಾಮವಾಗಿದೆ, ಜಾಗೃತಸ್ಥಾನವಾದ ಈ ಎಡೆಯೂರು*

## ಪಂಚಶತಮಾನೋತ್ಸವ :–

ಈ ಮಹಾನುಭಾವಿಗಳ ಪಂಚಶತಮಾನೋತ್ಸವದ ಸಮಾರಂಭಗಳನ್ನು ಕರ್ನಾಟಕದ ಅನೇಕ ಪ್ರಮುಖಸ್ಥಳಗಳಲ್ಲಿಯೂ ತಮಿಳುನಾಡಿನ ತಿರುವಣ್ಣಾಮಲೈ (ಅರುಣಾಚಲೇಶ್ವರ) ಕ್ಷೇತ್ರದಲ್ಲಿಯೂ ಆಂಧ್ರಪ್ರದೇಶದ ಉರುವಕೊಂಡ ಶ್ರೀ ಕರಿಬಸವ ರಾಜೇಂದ್ರ ಜಗದ್ಗುರುಮಠದಲ್ಲಿಯೂ ಏರ್ಪಡಿಸಿ ಶ್ರೀ ಸಿದ್ಧಲಿಂಗಸಂದೇಶವನ್ನು ಬಿತ್ತರಿಸಲಾಗಿದೆ.

ಮೈಸೂರು, ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳಲ್ಲಿ ಸಿದ್ಧಲಿಂಗೇಶ್ವರರ ಬಗ್ಗೆ ವಿಚಾರಸಂಕಿರಣಗಳನ್ನೂ ಮಾಡಿಸಲಾಯಿತು. ಬೆಂಗಳೂರು ವಿಶ್ವವಿದ್ಯಾಲಯದವರು 'ವಚನಕಾರ ಸಿದ್ಧಲಿಂಗಯತಿ' ಎಂಬ ಸವಿಮರ್ಶ ಪುಸ್ತಕವನ್ನು ಹೊರತಂದಿದ್ದಾರೆ. ಇನ್ನುಳಿದ ವಿಶ್ವವಿದ್ಯಾಲಯದವರೂ ಇಂತಹ ಪುಸ್ತಕಗಳನ್ನು ಕ್ಷಿಪ್ರದಲ್ಲಿ ಪ್ರಕಟಿಸುವವರಿದ್ದಾರೆ. ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ಭಾಷಣಗಳನ್ನು ಮಾಡಿಸಿ, ಕಿರುಹೊತ್ತಗೆಯನ್ನೂ 'ಸಿದ್ಧಲಿಂಗ ವಚನ ಪರಿಮಳ'ವನ್ನೂ ಪ್ರಸಾರಮಾಡಿದೆ.

---

* ಬೆಂಗಳೂರು–ಮಂಗಳೂರು ರಾಷ್ಟ್ರೀಯ ಹೆದ್ದಾರಿಯಮೇಲೆ, ಬೆಂಗಳೂರಿನಿಂದ ೫೭ ಮೈಲಿ ದೂರದಲ್ಲಿದೆ. (ತುಮಕೂರಿನಿಂದ ೩೮ ಮೈಲಿ)

ಸಿದ್ಧಲಿಂಗೇಶ್ವರರಿಗೆ ಸಂಬಂಧಿಸಿದ ಎಲ್ಲಾಸಾಹಿತ್ಯವನ್ನೂ ಸಂಪಾದನೆ ಮಾಡಿಸಿ, ಪ್ರಕಟಿಸಬೇಕೆಂಬ ಉದ್ದೇಶದಿಂದ ಪಂಚಶತಮಾನೋತ್ಸವ ಸಮಿತಿಯು 1) ಹೇರಂಬ ಕವಿ ರಚಿತ ಸಿದ್ಧಲಿಂಗೇಶ್ವರ ಚಾರಿತ್ರ (ಸಾಂಗತ್ಯಕಾವ್ಯ) 2) ಚನ್ನವೀರ ಜಂಗಮದೇವ ಕೃತ ಷಟ್ಸ್ಥಲವಲ್ಲಭ (ಚಂಪೂಕಾವ್ಯ) 3) ವಿರಕ್ತ ತೋಂಟದಾರ್ಯರ ಸಿದ್ಧಲಿಂಗೇಶ್ವರ ಶತಕ (ವೃತ್ತಕಾವ್ಯ) – ಮುಂತಾದ ಮಹದ್ಗ್ರಂಥಗಳನ್ನು ವಿದ್ವಾಂಸರುಗಳಿಗೆ ವಹಿಸಲಾಗಿದೆ.

ಧಾರವಾಡದ ಶ್ರೀ ಮುರುಘಾಮಠದ ಶ್ರೀ ಶ್ರೀ ಗಳವರು 'ಷಟ್ಸ್ಥಲಜ್ಞಾನ ಸಾರಾಮೃತ'ವನ್ನೂ, ಶಾಂತೇಶಕವಿಯ ಸಿದ್ಧೇಶ್ವರ ಪುರಾಣವನ್ನೂ ಪ್ರಕಟಿಸಿದ್ದಾರೆ.

ಶ್ರೀ ಸಿದ್ಧಲಿಂಗೇಶ್ವರರ ೭೦೧ ವಚನಗಳಿಂದ ಆರಿಸಿದ ಸರಳವಾದ ೧೦೮ ವಚನಗಳ ಇಂಗ್ಲಿಷ್ ಮತ್ತು ಮರಾಠಿ ಅನುವಾದಗಳನ್ನೂ ಸಮಿತಿಯಿಂದ ಪ್ರಕಟಿಸಲಾಗಿದೆ. ತೆಲುಗು ಭಾಷಾಂತರ ಸಿದ್ಧವಾಗಿದೆ. ತಮಿಳು, ಹಿಂದಿ, ಸಂಸ್ಕೃತ ಭಾಷಾಂತರಗಳೂ ಕನ್ನಡದ ಆವೃತ್ತಿ (ಟಿಪ್ಪಣಿ ಸಹಿತ) ಸಿದ್ಧವಾಗುತ್ತಲಿವೆ. ಸಿದ್ಧಲಿಂಗೇಶ್ವರರ ಸುಂದರ ಸೂಕ್ತಿಗಳನ್ನು 'ನುಡಿಪರುಷ' ಎಂಬ ಕಿರುಕೃತಿರೂಪದಲ್ಲಿ ಪ್ರಕಟಿಸಿದ್ದೇವೆ. ಎಡೆಯೂರುಕ್ಷೇತ್ರದಲ್ಲಿ ಅರ್ಚನೆಗಾಗಿ ಅಷ್ಟೋತ್ತರ ಶತ ಮತ್ತು ಸಹಸ್ರನಾಮಗಳನ್ನೂ ರಚನೆಮಾಡಿಸಿ ಪ್ರಕಟಿಸಿದ್ದೇವೆ. ಶಿವಭಕ್ತಿಸಾರದ ಮಾದರಿಯಲ್ಲಿ ಶ್ರೀ ಸಿದ್ಧಲಿಂಗ ಭಕ್ತಿಸಾರವನ್ನೂ ಪ್ರಕಟಿಸಲಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯದಿಂದ ಅವರ ವಚನ ಭಾಷಾಂತರ ಯೋಜನೆಯ ಮೂಲಕ, ಈ ಶರಣರ ಸಮಗ್ರ ವಚನಗಳನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿಸಲಾಗಿದೆ. ಷಟ್ಸ್ಥಲಜ್ಞಾನಸಾರಾಮೃತದ ಪದಪ್ರಯೋಗ ಕೋಶ (Concordance) ಸಹ ರಚಿತವಾಗುತ್ತಲಿದೆ. ಶ್ರೀ ಸ್ವಾಮಿಯವರ ವರ್ಣರಂಜಿತ ಸುಂದರ ಭಾವಚಿತ್ರವನ್ನು ಸುಪ್ರಸಿದ್ಧ ಕಲೆಗಾರರಿಂದ ಬರೆಸಲಾಗಿದೆ. ಅದರ ಪ್ರತಿಗಳನ್ನು ಅಚ್ಚುಹಾಕಿಸಬೇಕಾಗಿದೆ. ಶ್ರೀ ಸ್ವಾಮಿಯವರ ಪಿಂಗಾಣಿ ಮೂರ್ತಿಯನ್ನು ಮಾಡಿಸಿದೆ. ಈ ಮೂರ್ತಿಯ ಪ್ರತಿಗಳನ್ನು ಮಾಡಿಸಬೇಕಾಗಿದೆ. ಪ್ಲಾಸ್ಟಿಕ್ ಮೂರ್ತಿಗಳನ್ನು, ಲೋಹದ ಪದಕಗಳನ್ನು ಮಾಡಿಸಿದೆ. ಪೋಸ್ಟಲ್ ಸ್ಟ್ಯಾಂಪು ಮಾಡಿಸಿ ಬಿಡುಗಡೆ ಮಾಡಿಸಲು ಸಂಬಂಧ ಪಟ್ಟ ಅಧಿಕಾರಿಗಳಿಗೆ ವಿನಂತಿ ಮಾಡಲಾಗಿದೆ. ಸುಪ್ರಭಾತವನ್ನು ಗ್ರಾಮಫೋನ್ ರೆಕಾರ್ಡ್ ಮಾಡಿಸಲು ಮತ್ತು ಆಕಾಶವಾಣಿಯಿಂದ ಬಿತ್ತರಿಸಲು ಏರ್ಪಾಡು ನಡೆದಿದೆ,

## ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ

ಶ್ರೀ ಬಸವೇಶ್ವರರ ಧಾರ್ಮಿಕ, ನೈತಿಕ, ಸಾಮಾಜಿಕ, ಸಾಹಿತ್ಯಕ–ಸರ್ವತೋಮುಖವಾದ – ಆಂದೋಳನವು ನಿಜಕ್ಕೂ ಅಪ್ರತಿಮವಾದುದು. ಆದರೆ ಬಸವಭಾನು ಅಸ್ತಮಿಸಿದ ನಂತರ ಮತ್ತೆ ಕತ್ತಲು ಕವಿಯಿತು. ೧೫ನೆಯ ಶತಮಾನದಲ್ಲಿ ಸಿದ್ಧಲಿಂಗ ಭಾನು ಉದಯಿಸಿ. ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಾತ್ಮಕವಾದ ಬೆಳಕು ಮತ್ತೆ

ಪಸರಿಸಿತು.' ಅವರ ನಂತರ ಬಂದ ಎಲ್ಲ ಕವಿಗಳು ಇವರನ್ನು ಮನಸಾ ಸ್ತುತಿಸಿದ್ದಾರೆ. ಹಾಡುಗಬ್ಬಗಳೂ ಆರತಿಪದಗಳೂ ಪ್ರಚಾರಕ್ಕೆ ಬಂದಿವೆ. ಇವೆಲ್ಲವನ್ನೂ ಒಂದು ಕಡೆ ಸಂಗ್ರಹಿಸಿ ಮುದ್ರಣ ಮಾಡಿಸಿದರೆ ಭಕ್ತರಿಗೆ ಉಪಯೋಗವಾಗುತ್ತದೆಂದು ಭಾವಿಸಿ ಈ ಗ್ರಂಥದ ಯೋಜನೆಯನ್ನು ಮಾಡಲಾಯಿತು.

ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಸಂಸ್ಕೃತದಲ್ಲಿ ಸುಪ್ರಭಾತ ಮತ್ತು ನಕ್ಷತ್ರ ಮಾಲಿಕಾಸ್ತೋತ್ರಗಳನ್ನು ರಚಿಸಿಕೊಟ್ಟ ಪಂಡಿತ ಪಗಡದಿನ್ನಿ ಶ್ರೀ ಬಸವರಾಜಶಾಸ್ತ್ರಿಗಳನ್ನೂ ಕನ್ನಡದಲ್ಲಿ ಲಾವಣಿಯನ್ನು ಬರೆದುಕೊಟ್ಟ ಶ್ರೀ ಮಾ. ನಂ. ನಂಜಪ್ಪನವರನ್ನೂ ಹೃತ್ಪೂರ್ವಕವಾಗಿ ವಂದಿಸುತ್ತೇವೆ.

ನಮ್ಮ ಸಮಿತಿಯ ಕೋರಿಕೆಯನ್ನು ಮನ್ನಿಸಿ, ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯವರು ತಮ್ಮಲ್ಲಿರುವ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳ ಪರಿಶೀಲನೆಗೆ ಶ್ರೀ ಚ. ಸುಂದರೇಶನ್ ಅವರಿಗೆ ಅವಕಾಶ ಮಾಡಿಕೊಟ್ಟಿರುತ್ತಾರೆ. ಇದಕ್ಕಾಗಿ ನಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತೇವೆ.

ಶ್ರೀ ಚ. ಸುಂದರೇಶನ್ ಅವರು ನಮ್ಮ ವಿನಂತಿಗೆ ಓಗೊಟ್ಟು ಈ ಗ್ರಂಥದ ಸಂಪಾದನಾಕಾರ್ಯವನ್ನು ಒಪ್ಪಿ ಬಹಳ ಶ್ರದ್ಧೆ ಮತ್ತು ಭಕ್ತಿಯಿಂದ ಉತ್ತಮವಾಗಿ ನೆರವೇರಿಸಿದ್ದಾರೆ. ಕೃತಿಗೆ ವಿದ್ವತ್ಪೂರ್ಣ ಪೀಠಿಕೆಯನ್ನು ಬರೆದಿದ್ದಾರೆ. ಇವರಿಗೆ ನಮ್ಮ ಹಾರ್ದಿಕ ಅಭಿವಂದನೆಗಳು.

ಈ ಗ್ರಂಥಕ್ಕೆ (i) 'ಹರಕೆ'ಯನ್ನು ದಯಪಾಲಿಸಿದ ಶ್ರೀ ನಿ. ಪ್ರ. ಬಸವಲಿಂಗ ಸ್ವಾಮಿಗಳು, ಗವಿಮಠ, ನವಿಲುಗುಂದ (ii) 'ಶುಭಾಶೀರ್ವಾದ' ವನ್ನು ಕರುಣಿಸಿದ ಡಾ॥ ಜ. ಚ. ನಿ. ಸನ್ನಿಧಿಯವರು (iii) ಅಭಿಪ್ರಾಯವನ್ನು ನೀಡಿದ ಆಸ್ಥಾನವಿದ್ವಾನ್, ಸರ್ವದರ್ಶನತೀರ್ಥ ಶ್ರೀ ವೈ. ನಾಗೇಶಶಾಸ್ತ್ರಿಗಳವರು (iv) ಪ್ರಬುದ್ಧ 'ಮುನ್ನುಡಿ' ಯನ್ನು ನುಡಿದ ಸುಪ್ರಸಿದ್ಧ ಕವಿ – ವಿದ್ವಾನ್ ಡಾ॥ ಜಿ. ಎಸ್. ಶಿವರುದ್ರಪ್ಪನವರು (v) ಇಂಗ್ಲಿಷಿನಲ್ಲಿ 'ಸವಿನುಡಿ' ಯನ್ನು ಬರೆದಿರುವ ಡಾ॥ ಟಿ. ಎಸ್. ಕೃಷ್ಣಮೂರ್ತಿ – ಇವರೆಲ್ಲರಿಗೂ ನಮ್ಮ ಸಮಿತಿಯ ಪರವಾಗಿ ಅನಂತ ಧನ್ಯವಾದಗಳನ್ನು ಅರ್ಪಿಸುತ್ತೇವೆ

ಅಂದವಾಗಿ ಮುದ್ರಿಸಿಕೊಟ್ಟ ಗೋವರ್ಧನ ಪ್ರಿಂಟರ್ಸ್ ಇವರಿಗೆ ನಾವು ಕೃತಜ್ಞರು.

ಈ ಎಲ್ಲ ಮಹನೀಯರಿಗೂ ಈ ಗ್ರಂಥವನ್ನು ಓದಿ ಹಾಡಿ ನಲಿಯುವ ಸಹೃದಯ, ಭಕ್ತರೆಲ್ಲರಿಗೂ ಭಗವಾನ್ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯವರು ಸಮಸ್ತ ಸನ್ಮಂಗಲಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇವೆ.

— ಪ್ರಕಾಶಕರು

ಎಡೆಯೂರು ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಪಂಚಶತಮಾನೋತ್ಸವ ಸಮಿತಿ
೧೭, ಜಯದೇವನಿಲಯ, ಬೆಂಗಳೂರು – ೯

# ಸಂಪಾದಕರ ನುಡಿ

ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯಸಂಪಾದನೆಯ ಸಂದರ್ಭದಲ್ಲಿ ನನ್ನ ವಿಶೇಷ ಪರಿಶೋಧನೆಯ ಫಲವಾಗಿ ಲಭ್ಯವಾದ ಸಾಹಿತ್ಯ ಇನ್ನೊಂದು ಗ್ರಂಥದಷ್ಟೇ ಆಗಬಲ್ಲುದು. ಆದರೆ ಗ್ರಂಥಗೌರವಭಯದಿಂದ ಅಧಿಕೃತವೂ ಅಗತ್ಯವೂ ಆದ ಸಾರಪೂರ್ಣಸಾಹಿತ್ಯದ ಕಡೆಗೆ ಮಾತ್ರ ಲಕ್ಷ್ಯವಿಟ್ಟು, ಪರಿಷ್ಕರಿಸಿ ಸಂಪಾದಿಸಿರುವೆನು. ಸ್ತೋತ್ರಸಾಹಿತ್ಯವನ್ನು ಕುರಿತು ಬರೆದಿರುವ ಪೀಠಿಕೆ, ಆ ಭಾಗದಲ್ಲಿ ಬಂದಿರುವ ಕವಿ–ಕೃತಿಗಳನ್ನು ಕುರಿತ ಟಿಪ್ಪಣಿಗಳು ಹಾಗೂ ಅನುಬಂಧ–ಸಹೃದಯರ ವಿಶೇಷ ಅಧ್ಯಯನಕ್ಕೆ ತುಂಬ ನೆರವಾಗುವುದೆಂದು ನಂಬಿದ್ದೇನೆ. ಮೈಸೂರು ಸರಕಾರದ ಸೆಕ್ರೆಟೆರಿಯೆಟ್ ಕ್ಲಬ್, ಬೆಂಗಳೂರು ಅವರು ಏರ್ಪಡಿಸಿದ್ದ ಶ್ರೀ ಸಿದ್ಧಲಿಂಗೇಶ್ವರ ಪಂಚಶತಮಾನೋತ್ಸವದಲ್ಲಿ 27–9–1971ರಂದು ನಾನು ನೀಡಿದ ಉಪನ್ಯಾಸದ ವಿಸ್ತೃತರೂಪವೇ ಈ ಪೀಠಿಕಾಭಾಗವೆಂದೆನ್ನಬಹುದು.

ಸದ್ಭಕ್ತರು, ಸಮಚಿತ್ತರು, ಸುವಿರಕ್ತರು, ಸಂಶೋಧಕರು–ಎಲ್ಲ ಬಗೆಯ ಮನೋಧರ್ಮಿಗಳಿಗೂ ಪ್ರಸನ್ನತೆ, ಪರಿತೃಪ್ತಿಯನ್ನು ನೀಡುವ ಸಾಹಿತ್ಯವನ್ನು ಈ ಗ್ರಂಥ ಒಳಗೊಂಡಿದೆ. ಇಂತಹ ಅಮೂಲ್ಯವಾದ ಗ್ರಂಥಪ್ರಕಾಶನದ ಹೊಣೆಗಾರಿಕೆಯನ್ನು ಶ್ರೀ ಸಿದ್ಧಲಿಂಗೇಶ್ವರ ಪಂಚಶತಮಾನೋತ್ಸವ ಸಮಿತಿ, ಬೆಂಗಳೂರು – ಅವರು ವಹಿಸಿಕೊಂಡು ವಿಧಾಯಕವಾದ ಒಂದು ನೂತನಕಾರ್ಯವನ್ನು ಕಾಣಿಸಿದ್ದಾರೆ. ಕೃತಿಸಂಬಂಧದಲ್ಲಿ ಸಮಿತಿಯ ಪ್ರಧಾನಕಾರ್ಯದರ್ಶಿಗಳವರಾದ ಪೂಜ್ಯ ಶ್ರೀ ಹೆಚ್. ಆರ್. ಮಹಾಂತಯ್ಯನವರು (ವಿಶ್ರಾಂತ ಜಡ್ಜರು) ತುಂಬುಪ್ರೀತಿಯಿಂದ ನೆರವು ನೀಡಿದ್ದಾರೆ. ಪೂಜ್ಯರಾದ ಡಾ|| ಜಿ. ಎಸ್. ಶಿವರುದ್ರಪ್ಪ, ಎಂ. ಎ., ಪಿ ಎಚ್. ಡಿ. ಅವರು, ಡಾ|| ಜ. ಚ. ನಿ. ಮಹಾಸನ್ನಿಧಿಗಳವರು, ಸರ್ವದರ್ಶನತೀರ್ಥ ಶ್ರೀ ವೈ. ನಾಗೇಶಶಾಸ್ತ್ರಿಗಳವರು ಹಾಗೂ ಡಾ|| ಟಿ. ಎಸ್. ಕೃಷ್ಣಮೂರ್ತಿಗಳವರು – ಅನುಕ್ರಮವಾಗಿ ತಮ್ಮ ಮುನ್ನುಡಿ, ಶುಭಾಶೀರ್ವಾದ, ಅಭಿಪ್ರಾಯಗಳಿಂದ ಹರಸಿದ್ದಾರೆ. ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ|| ಹಾ. ಮಾ. ನಾಯಕ ಅವರು ತಮ್ಮ ಸಂಸ್ಥೆಯಲ್ಲಿರುವ ಓಲೆಪ್ರತಿಗಳನ್ನು ಪರಿಶೀಲಿಸಲು ಅವಕಾಶ ಮಾಡಿ ಕೊಟ್ಟಿರುತ್ತಾರೆ. ಪ್ರೊ. ಎಚ್. ದೇವೀರಪ್ಪ, ಎಂ. ಎ., ಅವರು, ಪ್ರೊ. ಟಿ. ಆರ್. ವಿಲೋಚನಶರ್ಮ ಅವರು ಮಹತ್ವದ ಈ ಗ್ರಂಥಕಾರ್ಯದಲ್ಲಿ ಶುಭಾಕಾಂಕ್ಷೆಯನ್ನು ವ್ಯಕ್ತಪಡಿಸಿರುತ್ತಾರೆ. ಈ ಎಲ್ಲ ಮಹನೀಯರ ಉಪಕಾರವನ್ನು ಸ್ಮರಿಸುತ್ತೇನೆ.

ಈ ಕೃತಿಯನ್ನು ಸುಂದರವಾಗಿ ಮುದ್ರಿಸಿರುವ ಗೋವರ್ಧನ್ ಪ್ರಿಂಟರ್ಸ್ ಅವರಿಗೂ ನೆರವು ನೀಡಿರುವ ಸರ್ವರಿಗೂ ನನ್ನ ಅನಂತ ನೆನಕೆ.

ಯುಗಾದಿ 4–4–1973. — ಚ. ಸುಂದರೇಶನ್.

ಭವತಾರಿಣಿ. 52, ಚೌಳುಬೀದಿ (ಕಬ್ಬನ್‌ಪೇಟೆ ಮಾರ್ಕೆಟ್ ಸಮೀಪ) ಬೆಂಗಳೂರು – 2

ಪಂಚಶತಮಾನೋತ್ಸವ ಸಮಿತಿ, ಬೆಂಗಳೂರು



ಚರಕುಲಚಕ್ರವರ್ತಿ

**ಭಗವಾನ್ ತೋಂಟದ ಶ್ರೀ ಸಿದ್ಧಲಿಂಗೇಶ್ವರರು**

(ಶ್ರೀ ಕ್ಷೇತ್ರ: ಎಡೆಯೂರು – ತುಮಕೂರು ಜಿಲ್ಲೆ)

# ಪರಿವಿಡಿ



*

## ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ

# ಕನ್ನಡ



ಭಗವಾನ್ ಶ್ರೀ ಸಿದ್ಧಲಿಂಗೇಶ್ವರರ

**ನಿರ್ವಿಕಲ್ಪ ಶಿವಯೋಗಸಮಾಧಿ ಗದ್ದುಗೆ**

(ಶ್ರೀ ಕ್ಷೇತ್ರ: ಎಡೆಯೂರು – ತುಮಕೂರು ಜಿಲ್ಲೆ)

# ಮಂಗಲ

ಮಂಗಲಂ ಶ್ರೀ ಸಿದ್ಧಲಿಂಗೇಶ । ಶಿವಭಕ್ತಪೋಷ ।
ಮಂಗಲಂ ಎಡೆಯೂರು ಪುರವಾಸ ॥ ಪ ॥

ಮಾರಮರ್ದನಶಂಭು ಸಂಭ್ರಮದಿ । ತ್ರಿವಿಧಾಂಗನಾಗಿ
ಧೀರಪ್ರಮಥರ ವೃಂದದೊಡಗೂಡಿ ॥
ವೀರಶೈವಾಚಾರ ಷಟ್ಸ್ಥಲ । ಚಾರುವಷ್ಟಾವರಣ ನೆಲೆಗಳ ।
ತೋರಲವತರಿಸಿರುವ ಸಿದ್ದೇಶ । ಶಿವಚಿತ್ಪ್ರಕಾಶ ॥ ೧ ॥

ಇಷ್ಟಲಿಂಗದಿ ದೃಷ್ಟಿ ಸ್ಥಿರಗೊಳಿಸಿ । ದೃಢಭಕ್ತಿಬಲಿಸಿ ॥
ಮೆಟ್ಟಿ ದಶವಾಯುಗಳ ಸುಳಿನಿಲಿಸಿ ॥
ಶಿಷ್ಟಹೃದಯೇಂದ್ರಿಯಗಳೆಲ್ಲವ । ಕಟ್ಟಿ ಸಲೆ ಸತ್ಪ್ರಾಣಲಿಂಗದಿ ।
ಮುಟ್ಟಿಭಾವವ ತೋರು ಸಿದ್ದೇಶ । ಶಿವಧರ್ಮಕೋಶ ॥ ೨ ॥

ಸಿಡಿಲಪೂಜೆಯ ಕೊಂಡೆ ಬಲಗೊಂಡೆ । ಸಲ್ಲೀಲೆಯಿಂದೆ
ಮಡಿಯೆ ನೋಡುತಲವರ ಬದುಕಿಸಿದೆ॥
ಅಡಿಯ ಸೋಂಕಿಸಿ ಜಲವ ಪುಟಿಸಿದೆ । ಅಡಿಯ ಸೋಂಕಿಸಿ ನದಿಯ ದಾಟಿದೆ
ಗುಡಿಯ ಬಂಡೆಯ ಬಸವಗುಣ್ಣಿಸಿದೆ । ಘನಮಹಿಮೆಯಿಂದೆ ॥ ೩ ॥

ಜಂಗಮಾರ್ಯನೆ ನಿನ್ನ ಲೀಲೆಗಳು । ಶಿವತತ್ತ್ವಕಲೆಗಳು ।
ಲಿಂಗ ಗುರು ಜಂಗಮರ ಚರಿತೆಗಳು ॥
ಲಿಂಗ ಮೂರಂಗಾರುಲಿಂಗಗ । ಳಂಗವಾರರ ಸಂಗಸುಖವನು ।
ಮಂಗಳಾಂಗನೆ ನೀಡು ಯತಿರಾಜ । ವೈರಾಗ್ಯತೇಜ ॥ ೪ ॥

ಜಯತು ಜಯ ಜಯ ಸಿದ್ಧಲಿಂಗೇಶ । ಶಿವಗೌರಿವಾಸ
ಜಯತು ಜಯ ಜಯವಿಭವ ಮುರುಘೇಶ ॥
ಜಯತು ಜಂಗಮ ಚಂದ್ರಸೂರ್ಯಗೆ । ಜಯತು ಶ್ರೀ ಶಿವಯೋಗತೂರ್ಯಗೆ ।
ಜಯತು ಚರಕುಲಸಾರ್ವಭೌಮನಿಗೆ । ಭಕ್ತಾಭಿಮಾನಿಗೆ ॥ ೫ ॥

---

ರಚನೆ: ಶ್ರೀ ಬಸವೇಶ್ವರ ಶಿವಪ್ಪ ತುಪ್ಪದ, ಗದುಗು.

# ಸಾರಸಂಗತಿ



——:0:——

# ಪೀಠಿಕೆ

ಚ. ಸುಂದರೇಶನ್, ಎಂ.ಎ.,

## ೧ ಸ್ತೋತ್ರ: ವ್ಯಾಖ್ಯೆ, ನಿರೂಪಣೆ, ಮೌಲ್ಯ.

ಭಕ್ತಿಭಾವದ ಪ್ರಕರ್ಷಾವಸ್ಥೆಯಲ್ಲಿ ಮೂಡಿಬಂದ ಸಹಜ ಅಭಿವ್ಯಕ್ತಿಯೇ ಸ್ತೋತ್ರ. ನವವಿಧಭಕ್ತಿಯಲ್ಲಿ ಸ್ತೋತ್ರವೂ ಸೇರಿದೆ. ಸ್ತುತಿ, ಸ್ತವ, ಸ್ತವನ, ಭಜನೆ, ನುತಿ, ಕೀರ್ತನೆ, ಪ್ರಾರ್ಥನೆ – ಇವೆಲ್ಲ ಒಂದೆ ಅರ್ಥವುಳ್ಳ ಬೇರೆ ಬೇರೆ ರೂಪಗಳಾಗಿವೆ. ಪರಿಶುದ್ಧವಾದ ಮನಸ್ಸಿನಿಂದ ಸ್ಫುಟವಾಗಿ ಸ್ತೋತ್ರ ಪಠನಮಾಡಬೇಕು. ಸ್ತೋತ್ರಾರ್ಥ ವನ್ನು ಅನುಸಂಧಾನ ಮಾಡಬೇಕು. ದೇವರ ಪೂಜೆ, ಪ್ರಾರ್ಥನೆ, ಗುರುವಿನ ಉಪಾಸನೆ, ಸ್ವಾಧ್ಯಾಯ, ಇಂದ್ರಿಯನಿಗ್ರಹ, ತಪಸ್ಸು– ಇವುಗಳಿಂದ ನಮ್ಮ ಜೀವನ ಭಕ್ತಿಪೂರ್ಣ ವಾಗುತ್ತದೆ. ಒಳಬಾಳಿನ ಹದುಳತೆಗೆ ಸ್ತೋತ್ರಸಾಹಿತ್ಯ ದಿವ್ಯಸಾಧನ.

ಭಾವ ಮತ್ತು ಗೀತಗುಣದಿಂದ ತುಂಬಿದ ಸಾಹಿತ್ಯಪ್ರಕಾರವೇ ಭಾವಗೀತೆ. ಇದು ಸಂಕ್ಷಿಪ್ತವೂ ಚಿತ್ತಾಕರ್ಷಕವೂ ಆದ ಕಾವ್ಯಬಂಧ. ಶೃಂಗಾರಗೀತೆಗಳೂ ಭಕ್ತಿ ಗೀತೆಗಳೂ ಭಾವಗೀತೆಯ ಸಾಹಿತ್ಯಪ್ರಕಾರದಲ್ಲಿ ಸೇರಿವೆ. ಈ ಭಕ್ತಿಗೀತೆಗಳನ್ನೇ ಸ್ತೋತ್ರಗಳು ಎಂದು ನಾವು ಕರೆಯಬಹುದು.

"ಗುಣಸ್ತೋಕಂ ತದುಲ್ಲಂಘ್ಯ ತದ್‌ಬಹುತ್ವಕಥಾ ಸ್ತುತಿಃ"

ಸ್ವಲ್ಪ ಗುಣವನ್ನು ಬಹುವಾಗಿ ತಿಳಿಸುವುದಕ್ಕೆ 'ಸ್ತುತಿ' ಎಂದು ಹೆಸರು. ಆದರೆ ಪರಮಾತ್ಮನಲ್ಲಿ ಅನಂತ ಗುಣಗಳಿವೆ. ಅಷ್ಟು ಗುಣಗಳನ್ನು ವರ್ಣಿಸಲು ಸ್ತೋತ್ರ ಮಾಡುವವನಿಗೆ ಸಾಮರ್ಥ್ಯವೇ ಇರುವುದಿಲ್ಲ. ಭಗವಂತನ ಮಹಿಮಾಸ್ವರೂಪವನ್ನು ವರ್ಣಿಸಲು ಆಸೆಯಿದ್ದರೂ ಸ್ತುತಿಸಲು ತನಗೆ ಶಬ್ದಗಳು ಸಾಲವು ಎಂದೆನ್ನುತ್ತಾನೆ ಒಬ್ಬ ಅನುಭಾವಿ.*

"ಅನಿರ್ವಚನೀಯನ ವಚನಕ್ಕೆ ತರಲಿಲ್ಲ ನಿಲ್ಲೋ!"

ಎಂದು ಶಿವಶರಣ ಚಂದಿಮರಸರು ನುಡಿದಿರುವರು. ಈ ಭಾವದ ಸತ್ಯವನ್ನು ಪುಷ್ಪದಂತಕವಿ ಮನಗಂಡಿದ್ದರೂ ತನ್ನದೇ ಆದ ಜಾಣ್ಮೆಯನ್ನು ಸ್ತೋತ್ರಸಂದರ್ಭದಲ್ಲಿ ಹೀಗೆ ವ್ಯಕ್ತಪಡಿಸಿದ್ದಾನೆ:

"ಶಿವನೆ, ನಿನ್ನ ಮಹಿಮೆಯ ಪಾರವನ್ನು ಅರಿಯದವರ ಸ್ತೋತ್ರವು ಅಯುಕ್ತ ವಾದುದಾದರೆ, ನಿನ್ನ ವಿಷಯದಲ್ಲಿ ಬ್ರಹ್ಮಾದಿಗಳ ಸ್ತೋತ್ರವೂ ಅಯುಕ್ತವೇ! ತನ್ನ

* ಹಲಾಯುಧ ಸ್ತೋತ್ರ. ॥೫॥

ಬುದ್ಧಿಗೆ ತಿಳಿದಷ್ಟನ್ನು ಮಾತ್ರ ಸ್ತುತಿಸುವ ಯಾವನೂ ನಿಂದ್ಯನಲ್ಲ – ಎನ್ನುವುದಾ
ನಿನ್ನ ಸ್ತೋತ್ರದಲ್ಲಿ ನನ್ನ ಈ ಪ್ರಯತ್ನವೂ ಕೂಡ ದೋಷರಹಿತವಾದದ್ದೇ ಸ
ಈ ಪರಿಯಲ್ಲಿ ಶಿವನನ್ನು ಸ್ತುತಿಸಲು ಸ್ವಾತಂತ್ರ್ಯವನ್ನು ಚಾತುರ್ಯದಿಂದ ಪುಷ್ಪದ
ಕವಿ ಸಂಪಾದಿಸಿರುವನು.

ದೇವರ ಪೂಜೆಯನ್ನು ಪುಷ್ಪ, ಸ್ತೋತ್ರ, ಧ್ಯಾನ – ಮುಂತಾದವುಗಳಿಂದ ನಾ
ಮಾಡುತ್ತೇವೆ. ಶ್ರದ್ಧೆ, ಭಕ್ತಿ, ಸುಜ್ಞಾನಗಳಿಂದ ನಾವು ನಡೆಸುವ ಪೂಜೆ ಅರ್ಥಪೂರ್ಣ
ವಾಗುತ್ತದೆ. ನಿರ್ಮಲ ಹೃದಯದಿಂದ ದೇವರನ್ನು ಸ್ತುತಿಸಿದಾಗ ಪ್ರಸನ್ನತೆ, ಪರಮಶಾ
ನಮಗೆ ಪ್ರಾಪ್ತವಾಗುತ್ತದೆ.

ಏಕಾಗ್ರಚಿತ್ತದಿಂದ ಮೂಲಚೈತನ್ಯವನ್ನು ಸ್ತುತಿಸಿದಾಗ, ಧ್ಯಾನದ ಪರಿಣಾ
ದಿವ್ಯ ಅನುಭವವುಂಟಾಗುತ್ತದೆ. ಇಂತಹ ಆನಂದದ ಬೆಳಕಿನ ಜೀವನಕ್ಕಾಗಿ ನ
ಪೂರ್ವಿಕರು ಹೃದಯ ತುಂಬಿ ಹಾಡಿದ್ದಾರೆ; ಹರಸಿದ್ದಾರೆ:

"ಪ್ರಾತಃಸ್ಮರಾಮಿ ಹೃದಿ ಸಂಸ್ಫುರದಾತ್ಮತತ್ತ್ವಂ
ಸಚ್ಚಿತ್ಸುಖಂ ಪರಮಹಂಸಗತಿಂ ತುರೀಯಮ್ ।
ಯತ್ ಸ್ವಪ್ನಜಾಗರ ಸುಷುಪ್ತಮವೈತಿ ನಿತ್ಯಂ
ತದ್ಬ್ರಹ್ಮ ನಿಷ್ಕಲಮಹಂ ನ ಚ ಭೂತಸಂಘಃ." *

"ಸಚ್ಚಿದಾನಂದಸ್ವರೂಪವೂ ಯೋಗಿಶ್ರೇಷ್ಠರ ಗತಿಯೂ ತುರೀಯವ
ಅರಿವಿನ ಅವಸ್ಥೆಯೂ ಅಮರವೂ ಆದ, ಹೃದಯದಲ್ಲಿ ಚೆನ್ನಾಗಿ ಸ್ಫುರಿಸುತ್ತಿರುವ ಆ
ತತ್ತ್ವವನ್ನು ಪ್ರಾತಃಕಾಲದಲ್ಲಿ ಸ್ಮರಿಸುತ್ತೇನೆ. ನಾನು ಅಖಂಡ ಬ್ರಹ್ಮಸ್ವರೂಪವಲ್ಲ
ಪಂಚಭೂತಗಳ ಸಂಘವಲ್ಲ."

*

"ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ
ವ್ಯಶೇಮ ದೇವಹಿತಂ ಯದಾಯುಃ ॥"

"ಬೆಳಕಿನ ಸ್ವರೂಪಿಗಳಾದ ಎಲೈ, ದೇವತೆಗಳಿರಾ, ಮಂಗಳಕರವಾದುದನ್ನು ನಮ್ಮ
ಕಿವಿಗಳು ಕೇಳುವಂತಾಗಲಿ. ಪಾವನವಾದುದನ್ನು ನಮ್ಮ ಕಣ್ಣುಗಳು ನೋಡಲಿ.
ದೇವರು ನಮಗೆ ನೀಡಿರುವ ಆಯುಷ್ಯವನ್ನು ಆರೋಗ್ಯದೃಢಕಾಯರಾಗಿ ಕಳೆಯು
ವಂತಾಗಲಿ. ನಾವು ದೇವರನ್ನು ಸ್ತೋತ್ರಮಾಡುತ್ತಾ ಚಿರಕಾಲ ಬಾಳೋಣ."

* ಶ್ರೀ ಶಂಕರಾಚಾರ್ಯರು – ಪ್ರಾತಃಸ್ಮರಣಸ್ತೋತ್ರ ॥ ೧ ॥

—ಇದು ನಮ್ಮ ಪೂರ್ವಿಕರ ಪ್ರಾರ್ಥನೆ. ಲೋಕಕಲ್ಯಾಣದ ಪರಮೋದ್ದೇಶವನ್ನುಳ್ಳ ಶಾಂತಿಪಾಠ! ಯುಗ ಯುಗಕ್ಕೂ ಋಷಿಗಳು ನೀಡಿರುವ ಜೀವನದರ್ಶನ!

ಭಕ್ತಿಸಾಧನೆಗೆ ಪುಷ್ಪ, ಸ್ತೋತ್ರ, ಜಪ, ಧ್ಯಾನ, ಶಮಾಗುಣಗಳು ಆವಶ್ಯಕ. ಈ ಬಗೆಗೆ ಸುಭಾಷಿತವೊಂದು ಹೀಗಿದೆ:

"ಪುಷ್ಪಕೋಟಿ ಸಮಂ ಸ್ತೋತ್ರಂ
ಸ್ತೋತ್ರಕೋಟಿ ಸಮಂ ಜಪಂ
ಜಪಕೋಟಿ ಸಮಂ ಧ್ಯಾನಂ
ಧ್ಯಾನಕೋಟಿ ಸಮಂ [1]ಶಮಃ[1]"

ಕೋಟಿ ಪುಷ್ಪ ಒಂದು ಸ್ತೋತ್ರಕ್ಕೆ ಸಮ. ಕೋಟಿ ಸ್ತೋತ್ರ ಒಂದು ಜಪಕ್ಕೆ ಸಮ. ಕೋಟಿ ಜಪ ಧ್ಯಾನಕ್ಕೆ ಸಮ. ಕೋಟಿ ಧ್ಯಾನ ಶಾಂತಿಗುಣಕ್ಕೆ ಸಮ.

ಶಾಂತಿಗುಣ ಧ್ಯಾನದ ಪರಮಫಲವೆಂಬುದನ್ನೂ ಸಾಧನೆಯ ನೆಲೆಯಲ್ಲಿ ಸ್ತೋತ್ರವಿದೆಯೆಂಬುದನ್ನೂ ಈ ಸುಭಾಷಿತ ಸೂಚಿಸುತ್ತಿದೆ. ಆದರೆ ವ್ಯಾಪಕವೂ ಗಾಢವೂ ಆದ ಅನುಭವ, ಪರಿಚಿಂತನೆಯ ದೃಷ್ಟಿಯಿಂದ ಸ್ತೋತ್ರ ಭಕ್ತಿಜೀವನದ ಸಾಧನಸಂಪತ್ತು ಮಾತ್ರವೇ ಅಲ್ಲ, ಸಿದ್ಧಿಯ ಸೌಭಾಗ್ಯವೂ ಹೌದು ಎಂಬ ಅರಿವು ಹೊಳೆದುಬರುತ್ತದೆ.

ಸಾಧಕ, ಸಿದ್ಧಪುರುಷರಿಬ್ಬರಿಗೂ ಸ್ತೋತ್ರವು ಸಂಬಂಧಿಸಿದುದಾಗಿದೆ ಎಂಬುದನ್ನು ಮುಂದಿನ ಉದಾಹರಣೆಗಳಿಂದ ನಾವು ತಿಳಿಯಬಹುದು:

"ಆತ್ಮಾ ತ್ವಂ, ಗಿರಿಜಾ ಮತಿಃ, ಸಹಚರಾಃ ಪ್ರಾಣಾಃ, ಶರೀರಂ ಗೃಹಂ।
ಪೂಜಾ ತೇ ವಿಷಯೋಪಭೋಗರಚನಾ, ನಿದ್ರಾ ಸಮಾಧಿಸ್ಥಿತಿಃ।
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ, ಸ್ತೋತ್ರಾಣಿ ಸರ್ವಾಗಿರೋ।
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ ॥ *

"ಪ್ರಭು, ಆತ್ಮವು ನೀನೆ. ಬುದ್ಧಿಯೆ ಪಾರ್ವತೀದೇವಿ, ಪ್ರಾಣಗಳು ಸಹಚರರು; ಶರೀರವು ನಿನ್ನ ಮಂದಿರ; ವಿಷಯಸೇವನೆಯೇ ನಿನ್ನ ಪೂಜೆ; ನಿದ್ರೆಯೇ ಸಮಾಧಿಸ್ಥಿತಿ, ಕಾಲ ನಡಿಗೆಯೆಲ್ಲ ನಿನ್ನ ಪ್ರದಕ್ಷಿಣೆ. ಆಡುವ ನುಡಿಯೆಲ್ಲ ಸ್ತೋತ್ರಗಳು. ನಾನು ಮಾಡುವ ಸಕಲ ಕ್ರಿಯೆಗಳೂ ಓ ಶಂಭುವೇ, ಇವೆಲ್ಲ ನಿನ್ನ ಆರಾಧನೆ!

*

ಎನ್ನ ಕಾಯವು ನಿನಗೆ
ಉನ್ನತಾಲಯವಾಯಿ–
ತಿನ್ನೆನಗೆ ಭಯವೆಂತೆ ಎಲೆ ಲಿಂಗವೇ ॥ ಪ ॥

1 ಮನೋರ್ಲಯಃ।

* ಶ್ರೀ ಶಂಕರಾಚಾರ್ಯರು. ಶಿವಮಾನಸಪೂಜಾ ॥ ४ ॥

"ಎನ್ನ ಸಮತೆಯೆ ಜಲವು
ಎನ್ನ ಸದ್ಗುಣ ಗಂಧ
ಎನ್ನ ನಿತ್ಯತ್ವವೇ ಅಕ್ಷತೆಗಳು
ಎನ್ನ ಜ್ಞಾನವೆ ಪುಷ್ಪ
ಎನ್ನ ಭಕ್ತಿಯೆ ಬೋನ
ಎನ್ನ ಮನವೇ ನಿಮಗೆ ಪೂಜಾರಿಯು॥"

— ಮುಪ್ಪಿನ ಷಡಕ್ಷರಿಗಳು.

"ಸ್ವಯ ಪರವೆಂಬ ವಿವೇಕದ ಅನುಭಾವ ಅಡಗಿ
ನಿಂದ ಮನವೆ ಸ್ತೋತ್ರ."

— ಸ್ವತಂತ್ರ ಸಿದ್ಧಲಿಂಗೇಶ್ವರರು.

ಅನುಭಾವಿಗಳ ಇಂತಹ ರತ್ನಸೂಕ್ತಿಗಳ ಬೆಳಕಿನಲ್ಲಿ ಸ್ತೋತ್ರದ ಅರ್ಥವ್ಯಾಪ್ತಿ, ಮಹಿಮೆ, ಮೌಲ್ಯಗಳನ್ನು ನಾವು ಮನಗಾಣಬಹುದು. ಪೂಜ್ಯರಾದ ಅಥಣಿ ಮಹಾ ಶಿವಯೋಗಿಗಳವರು ಆಕಾಶದಲ್ಲಿ ಚಲಿಸುವ ಮೋಡಗಳನ್ನು ಕಂಡು ಶಿವನ ಲೀಲೆಯನ್ನು ಗುರುತಿಸಿ ತನ್ಮಯರಾಗುತ್ತಿದ್ದರು. ತಮ್ಮ ಹಸ್ತದಿಂದಲೇ ಮಂಗಲ ಆರತಿಯನ್ನು ಆಕಾಶಕ್ಕೆ ಬೆಳಗುತ್ತಿದ್ದರು. ಶಿವಾನುಭಾವಿಗಳ ಘನ ನಿಲವಿನಲ್ಲಿ ಮೌನವೇ ಮಹಾ ಸ್ತೋತ್ರ; ಜೀವನವೇ ಪರಂಜ್ಯೋತಿ.

## ೨ ಸ್ತೋತ್ರಸಾಹಿತ್ಯಸ್ವರೂಪ – ಪರಂಪರೆ

ಭಾರತೀಯ ಸ್ತೋತ್ರಸಾಹಿತ್ಯದ ಉಗಮ ಋಗ್ವೇದದಿಂದಲೇ ಪ್ರಾರಂಭ ವಾಗುತ್ತದೆ. ಜಗತ್ತಿನ ಗ್ರಂಥಭಂಡಾರಕ್ಕೆ ಪ್ರಥಮ ಕೃತಿಯಾದ ಸೂಕ್ತಗಳು ದಿಗ್ದಿಗಂತ ಗಳನ್ನು ಪಾವನಗೊಳಿಸಿರುವ ಭಕ್ತಿರಸವಾಹಿನಿಯಾಗಿವೆ. ಪರಿಶುದ್ಧ ಅಂತಃಕರಣರೂ ಪರಮಾನುಭಾವಿಗಳೂ ಆದ ದ್ರಷ್ಟಾರರ ದಿವ್ಯವಾಣಿಯಿದು.

"ತುಷ್ಟೋ ದೇವಃ ಇಷ್ಟಂ ದದಾತಿ"

—ಸ್ತೋತ್ರದಿಂದ ಪ್ರಸನ್ನರಾದ ದೇವತೆಗಳು ಇಷ್ಟಾರ್ಥವನ್ನು ಈಡೇರಿಸುವರು. ಪೃಥ್ವಿ, ಅಪ್ಪು, ವಾಯು, ತೇಜ, ಆಕಾಶ – ಈ ಪಂಚಭೂತಗಳ ಹಿನ್ನೆಲೆಯಲ್ಲಿರುವ ಶಕ್ತಿಗಳೇ ದೇವತೆಗಳು. ಇವರನ್ನು ಕುರಿತದ್ದೇ ಸ್ತೋತ್ರ. ಜಗತ್ತಿನ ಅದ್ಭುತಗಳನ್ನು ಕಂಡು ಹೃದಯ ತುಂಬಿ ಬಂದ ಭಾವದ ಹೊನಲೇ ಸ್ತೋತ್ರರೂಪದ ಭಾವಗೀತೆಗಳು. ಸ್ತೋತ್ರಸಾಹಿತ್ಯದ ಛಂದೋರೂಪದ ಬಗೆಗೆ ನಿರ್ಬಂಧವೇನಿಲ್ಲ. ಕಾವ್ಯ ಪುರಾಣಗಳ ಯುಗದಲ್ಲಿ ಸ್ತೋತ್ರಸಾಹಿತ್ಯ ವಿಪುಲವಾಗಿ ಬೆಳೆದುಬಂದಿದೆ. ಇತಿಹಾಸ, ತಂತ್ರಗಳಲ್ಲಿ ಅಂತರ್ಗತವಾದ ಸ್ತೋತ್ರಗಳೂ ಅಧಿಕವಾಗಿವೆ. ಇವುಗಳಲ್ಲಿ ಕೆಲವಂತೂ ರಹಸ್ಯಬೋಧಾ ಸಾಹಿತ್ಯದ ಅಥವಾ ಅನುಭಾವಸಾಹಿತ್ಯದ ಅತ್ಯುತ್ತಮ ಉದಾಹರಣೆಗಳಾಗಿವೆ.

'ಸ್ತೋತ್ರಪ್ರಿಯಾ ಹಿ ವೈ ದೇವಾಃ'
'ಸ್ತೋತ್ರಾನಂದ ಶಿವ ಮಹಾದೇವ'
'ಸ್ತೋತ್ರಂ ಕಸ್ಯ ನ ತುಷ್ಟಯೇ'
'ಸ್ತುತಿ ತಿಳಿಯದವನಿಗೆ ಗತಿಯೇನು ?'

ಸ್ತೋತ್ರದ ಬಗೆಗೇ ಇರುವ ಈ ಸುಭಾಷಿತಗಳು ಗಮನಾರ್ಹವಾಗಿವೆ.

ತಮ್ಮ ರಚನೆಗಳ ಕೊನೆಯಲ್ಲಿ ಸ್ತೋತ್ರಫಲದ ಸೂಚನೆಯನ್ನು ಕವಿಗಳು ಹೃದಯಂಗಮವಾಗಿ ಕಾಣಿಸುವ ಪದ್ಧತಿ ಮೊದಲಿನಿಂದಲೂ ರೂಢಿಯಲ್ಲಿದೆ. ಸ್ತೋತ್ರಫಲದ ಬಗೆಗೆ ಕವಿಗಳ ನಿರ್ದೇಶನಕ್ರಮವನ್ನು ಕುರಿತ ಅಧ್ಯಯನವೂ ಸ್ವಾರಸ್ಯಕರವಾದುದೇ !

"ಸಪುತ್ರಂ ಧನಂ ಧಾನ್ಯಂ ಮಿತ್ರಂ ಕಳತ್ರಂ ಮೋಕ್ಷಂ ಪ್ರಯಾತಿ"

ಎಂದು ಒಂದೇ ಸಾಲಿನಲ್ಲಿ ಸಕಲ ಸೌಭಾಗ್ಯವನ್ನು ಸೂಚಿಸುವ ಪರಿಕ್ರಮ ನಮ್ಮ ಕವಿಗಳಿಗೆ ಪ್ರಿಯವಾಗಿದೆ. ಆರೋಗ್ಯ, ಆಯುಷ್ಯ, ಪುಣ್ಯಪ್ರಾಪ್ತಿ, ಪುತ್ರಸಂತಾನ, ಅಷ್ಟೈಶ್ವರ್ಯ, ಕೈವಲ್ಯ, ಅನಂತ ಆನಂದಾನುಭವ, ಶಾಶ್ವತಸುಖ – ಈ ಫಲಗಳನ್ನು ಸಾಮಾನ್ಯವಾಗಿ ಎಲ್ಲ ಸ್ತೋತ್ರಕವಿಗಳು ಕಾಣಿಸಿರುವರು. ಗ್ರಹ, ನಕ್ಷತ್ರ, ಕಳ್ಳರು, ಅಗ್ನಿ– ಮುಂತಾದವುಗಳಿಂದ ಒದಗುವ ಪೀಡೆಗಳ ಪರಿಹಾರಕ್ಕಾಗಿ ಸ್ತೋತ್ರಪಠನ ಅಗತ್ಯ ಎಂದಿದ್ದಾರೆ. ಕೆಟ್ಟ ಸ್ವಪ್ನಗಳ ಪರಿಹಾರ, ವಿಘ್ನಗಳ ನಿವಾರಣೆ – ಸ್ತೋತ್ರಪಠನದಿಂದ ಆಗುತ್ತದೆ. ಆತ್ಮಾನಂದ ಉಂಟಾಗುತ್ತದೆ. ಸ್ತೋತ್ರದಿಂದ ರೋಗರುಜಿನಗಳು ಪರಿಹಾರವಾಗಿ ಅಮಂಗಳವು ತೊಲಗಿ, ಶಿವಸಿದ್ಧಿಯಾಗುತ್ತದೆ ಎನ್ನಲು ಬಾಣಕವಿಯ ಚಂಡೀಶತಕ, ಮಯೂರನ ಸೂರ್ಯಶತಕಗಳು ಉತ್ತಮ ದೃಷ್ಟಾಂತಗಳಾಗಿವೆ.

ಶಿವ, ಗೌರಿ, ಗಂಗೆ, ಗಣೇಶ, ವಿಷ್ಣು, ಲಕ್ಷ್ಮಿ, ಸರಸ್ವತಿಯರನ್ನು ಕುರಿತ ಸ್ತೋತ್ರಗಳು ಸಂಸ್ಕೃತ ವಾಙ್ಮಯದಲ್ಲಿ ವಿಪುಲವಾಗಿವೆ. ಸೋತ್ರಸಂಕಲನ ದೃಷ್ಟಿಯಿಂದ 'ಬೃಹತ್ ಸ್ತೋತ್ರರತ್ನಾಕರವೇ' ಮೊದಲಾದ ಕೃತಿಗಳು ಪ್ರಮುಖವಾಗಿವೆ.

ತಮ್ಮ ಇಷ್ಟದೈವವನ್ನು ಕವಿಗಳು, ದಾರ್ಶನಿಕರು ವಿಧವಿಧವಾಗಿ ಭಕ್ತಿ ತುಂಬಿ ವರ್ಣಿಸಿದ್ದಾರೆ. ದೇವನ ಕಾರುಣ್ಯವನ್ನು ಕೋರಿದ್ದಾರೆ. ಇವುಗಳಲ್ಲಿ ಕಾವ್ಯಗುಣ ಪೂರ್ಣವಾಗಿ ಚೇತೋಹಾರಿಯಾದ ಭಕ್ತಿಸ್ತೋತ್ರಗಳು ಪ್ರಕಾಶಗೊಂಡಿವೆ.

ಕಾಲಿದಾಸನ 'ಶ್ಯಾಮಲಾದಂಡಕ' ಕಾಲ ಮತ್ತು ಸತ್ವದ ದೃಷ್ಟಿಯಿಂದ ಅನರ್ಘ್ಯ ಸ್ತೋತ್ರವಾಗಿದೆ. ಕಾಳಿಕಾದೇವಿಯನ್ನು ಈ ಸ್ತೋತ್ರದಿಂದ ಕಾಲಿದಾಸನು ಒಲಿಸಿ ಕೊಂಡನೆಂದು ಪ್ರತೀತಿಯಿದೆ. ಈ ಸ್ತೋತ್ರವನ್ನು ಪಠನಮಾಡುತ್ತಿದ್ದಂತೆಯೇ ಪದಗಳ ಪವಾಡಕ್ಕೂ ಮಂಜುಳ ಶಬ್ದಸೌಷ್ಠವಕ್ಕೂ ಕವಿಯ ನಿರ್ಮಲಭಕ್ತಿಗೂ ಮನ ಸೋಲುವಂತಾಗುತ್ತದೆ.

ಸ್ತೋತ್ರಸಾಹಿತ್ಯಪ್ರಪಂಚದಲ್ಲಿ ಶ್ರೀ ಶಂಕರಾಚಾರ್ಯರ ಹೆಸರು ಅಮರವಾಗಿದ್ದು, ಇವರ ಶಿವಪಂಚಾಕ್ಷರೀಸ್ತೋತ್ರ, ದಕ್ಷಿಣಾಮೂರ್ತಿಸ್ತೋತ್ರ, ಅನ್ನಪೂರ್ಣಾಸ್ತೋತ್ರ, ಲಕ್ಷ್ಮೀನೃಸಿಂಹಸ್ತೋತ್ರ, ನಿರ್ವಾಣಷಟ್ಕಮ್, ಶಿವಾನಂದಲಹರಿ, ಸೌಂದರ್ಯಲಹರಿ, ಗಂಗಾಷ್ಟಕ, ಭಜಗೋವಿಂದಸ್ತೋತ್ರ ಮೊದಲಾದವು ಸುವಿಖ್ಯಾತವಾಗಿವೆ; ಭಕ್ತಿ-ಜ್ಞಾನಗಳ ತವನಿಧಿಯಾಗಿವೆ.

ಕುಲಶೇಖರರ 'ಮುಕುಂದಮಾಲಾ' ಹೃದಯಂಗಮ ರಚನೆಯಾಗಿದೆ. ಲೀಲಾಶುಕನ 'ಕೃಷ್ಣಕರ್ಣಾಮೃತ', ಭಾವಪೂರ್ಣವಾಗಿದೆ. ಜಯದೇವನ 'ಗೀತಗೋವಿಂದ' ಕೇವಲ ಭಕ್ತಿಯ ದೃಷ್ಟಿಯಿಂದ ಮಾತ್ರವಲ್ಲ, ಸಂಗೀತರೂಪಕಗಳಲ್ಲಿಯೂ ವಿಶಿಷ್ಟಸ್ಥಾನವನ್ನು ಪಡೆದು ಪ್ರಸಿದ್ಧವಾಗಿದೆ. ಇಂತಹ ಸ್ತೋತ್ರಗಳಿಂದ ಸಂಸ್ಕೃತವಾಙ್ಮಯ ಪ್ರಶಸ್ತವಾಗಿದೆ.

ಒಟ್ಟಿನಲ್ಲಿ ಸಂಸ್ಕೃತಸಾಹಿತ್ಯದ ಈ ಸ್ತೋತ್ರಪ್ರಕಾರ ಪ್ರಾಂತೀಯ ಭಾಷೆಗಳ ಸಾಹಿತ್ಯಕ್ಕೂ ನಿರಂತರ ಸ್ಫೂರ್ತಿ ನೀಡಿದೆ ಎಂದೆನ್ನಬಹುದು.

*

ಕನ್ನಡದಲ್ಲಿ ಜೈನ ವೀರಶೈವ ಬ್ರಾಹ್ಮಣ ಧರ್ಮಗಳ ಸಾಹಿತ್ಯದಲ್ಲಿ ಸ್ತೋತ್ರಗಳು ಹೇರಳವಾಗಿವೆ. ಭಕ್ತಿಯೇ ಮುಕ್ತಿಗೆ ಕಾರಣವೆಂದು ಎಲ್ಲರೂ ತಿಳಿಸಿದ್ದಾರೆ. ಜೈನ ಆಚಾರ್ಯ ಪರಂಪರೆಯಲ್ಲಿ ಅನೇಕ ಮಹಿಮರು ದೈವ, ಗುರು, ಶಾಸ್ತ್ರಸಂಬಂಧದಲ್ಲಿ ಸ್ತೋತ್ರರಚನೆ ಮಾಡಿರುತ್ತಾರೆ. ಧನಂಜಯನ ವಿಷಾಪಹಾರಸ್ತೋತ್ರ, ಕುಮುದಚಂದ್ರನ ಕಲ್ಯಾಣಮಂದಿರಸ್ತೋತ್ರ, ಸ್ವಾಮಿ ಸಮಂತಭದ್ರರ ಸ್ವಯಂಭೂಸ್ತೋತ್ರ, ಮಾನತುಂಗ ಕವಿಯ ಭಕ್ತಾಮರಸ್ತೋತ್ರ ಮೊದಲಾದವು ಜೈನಧರ್ಮದ ಸಾಹಿತ್ಯದಲ್ಲಿ ಶ್ರೇಷ್ಠವಾಗಿವೆ.

ವೀರಶೈವಕವಿಗಳೂ ಅಪಾರವಾಗಿ ಸ್ತೋತ್ರಸಾಹಿತ್ಯವನ್ನು ಸೃಷ್ಟಿಸಿರುತ್ತಾರೆ. ಮಹಾಕವಿ ಹರಿಹರನಂತೂ ಮನುಜರ ಮೇಲೆ ಸಾವವರ ಮೇಲೆ ಸಾಹಿತ್ಯರಚನೆಮಾಡಿ ಕೆಡಬಾರದೆಂದೂ

"ನೆನೆ ಪೊಗಳ್ ಅರ್ಚಿಸೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನಂ"

—ಎಂದು ತನ್ನ ಕಾವ್ಯೋದ್ದೇಶವನ್ನು ಘನವಾಗಿ ವ್ಯಕ್ತಪಡಿಸಿರುವನು. ಮುಂದಿನ ಶರಣಕವಿಗಳ ಜೀವನಕ್ಕೆ ಹರಿಹರನ ಈ ಪ್ರಭಾವ ಅತಿಶಯವಾಗಿದೆ.

"ನೋಡದ ಕಣ್ಗಳೇಕೆ, ಸಲೆ ಕೇಳದ ಕರ್ಣಮದೇಕೆ, ಭಕ್ತಿಯಿಂ
ಪಾಡದ ಬಾಯದೇಕೆ, ಪೆಸರ್ಗೊಳ್ಳದ ಜಿಹ್ವೆಯದೇಕೆ, ಪೂಜೆಯಂ
ಮಾಡದ ಕೈಗಳೇಕೆ, ನೆರೆ ಸೋಂಕದ ದೇಹಮದೇಕೆ, ಕೂಡಿಯ-
ಳ್ಕಾಡದ ಚಿತ್ತವೇಕೆನಗೆ ಹಂಪೆಯ ಲಿಂಗವೆ ನಿಮ್ಮೊಳಕ್ಕರಿಂ"*

---

* ಪಂಪಾಶತಕ ॥ ೮ ॥

ಭಕ್ತಿರಸಭರಿತವಾದ ಸೂತ್ರಶೈಲಿಯ ಸಂಪದ್ಯುಕ್ತಸಾಹಿತ್ಯವಾಗಿದೆ ಹರಿಹರನ ರಕ್ಷಾಶತಕ, ಪಂಪಾಶತಕಗಳು.

ಬಸವಣ್ಣನವರಿಗೆ ಹೊಗಳಿಕೆಯೆ ಹೊನ್ನಶೂಲವಾಗಿ, ಮನ್ನಣೆಯೇ ಮಸೆದ ಅಲಗಾಗಿ ಪರಿಣಮಿಸಿದೆ. ಇದು ಅವರ ವೈಯಕ್ತಿಕ ಮಿಡಿತವೆನಿಸಿದರೂ ಲೋಕದ ಹಿತಾರ್ಥವನ್ನು ಸಾಧಿಸುತ್ತಿದೆ. ಸ್ತೋತ್ರ, ಪ್ರಶಂಸೆಯನ್ನು ಹಾರೈಸದೆ 'ಎನ್ನ ಹೊಗಳಿಕೆಗೆ ಅಡ್ಡ ಬಾರಾ ಧರ್ಮಿೞ' ಎಂದು ಸಂಗಮದೇವರಲ್ಲಿ ಮೊರೆ ಹೋಗಿರುವ ಬಸವಣ್ಣನವರ ನಿಲವನ್ನು ಎಂದಿಗೂ ನಾವು ಮರೆಯಲಾಗದು.

ಸ್ತೋತ್ರಪ್ರಿಯರಲ್ಲದ ಬಸವಾದಿ ಪ್ರಮಥರನ್ನು ಕುರಿತ ಸ್ತೋತ್ರಸಾಹಿತ್ಯವೂ ಸಮೃದ್ಧವಾಗಿದೆ. ಸ್ತೋತ್ರಶೈಲಿಯ ವಚನಗಳನ್ನು ಸಹ ಶಿವಶರಣರು ರಚಿಸಿರುತ್ತಾರೆ. ತೋಂಟದ ಶ್ರೀ ಸಿದ್ಧಲಿಂಗಶಿವಯೋಗಿಗಳವರು ನಿರೂಪಿಸಿದ 'ಷಟ್ಸ್ಥಲಜ್ಞಾನ ಸಾರಾಮೃತ' ಸ್ತೋತ್ರದ ವಚನಗಳಿಂದಲೇ ಪ್ರಾರಂಭವಾಗಿರುವುದು ಗಮನಾರ್ಹವಾದ ಸಂಗತಿ.

"ಜ್ಞಾನಗಮ್ಯಂ ದೃಢಪ್ರಾಜ್ಞಂ ದೇವ ದೇವಂ ತ್ರಿಲೋಚನಂ
ಮಹಾದೇವಂ ಮಹಾತ್ಮಾನಂ ಮಹಾಜ್ಞಾನ ಪರಾತ್ಪರಂ
ಮಹಾಪಾಪಹರಂ ದೇವಂ ಮದ್ದೇವ ದೇವ ದೇವಂ
ಹರ ಹರಾ ಶಿವ ಶಿವಾ ಜಯ ಜಯ ಜಯತು
ಶರಣ ಕರುಣಾಕರ ತ್ರಾಹಿ ಮಾಂ ಭಕ್ತಿವತ್ಸಲ ಮತ್ಪ್ರಾಣನಾಥ
ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೇ." *

ಸ್ತೋತ್ರಶೈಲಿಯ ಇಂತಹ ವಚನಗಳು ಉಳಿದ ಶಿವಶರಣರ ಸಾಹಿತ್ಯದಲ್ಲಿಯೂ ದೊರಕುತ್ತಿವೆ. ಎಳಮಲೆಯ ಗುರುಶಾಂತದೇವನ ಶರಣಸ್ತೋತ್ರದ ವಚನ, ಷಟ್ಸ್ಥಲ ಸ್ತೋತ್ರದ ವಚನ, ಅಷ್ಟಾವರಣಸ್ತೋತ್ರದ ವಚನ, ಸಂಪಾದನೆಯ ಚೆನ್ನಂಜೆದೇವನ ಬಸವಸ್ತೋತ್ರದ ವಚನ ಮೊದಲಾದವು ಶರಣಪ್ರಿಯವಾದ ಸ್ತೋತ್ರಸಾಹಿತ್ಯಪ್ರಕಾರದ ಬಗೆ–ಬಿನ್ನಾಣವನ್ನು ಅರ್ಥವತ್ತಾಗಿ ಬಿಂಬಿಸುತ್ತಿವೆ. ಷಟ್ಸ್ಥಲಾಚಾರ ಸಾರೋದ್ಧಾರ ಸಂಪಾದನೆಯ ಸಿದ್ಧವೀರಣ್ಣದೇವರು ಸೇರಿಸಿದ "ಲಿಂಗಸ್ತೋತ್ರದ ವಚನಗಳು", ಷಟ್ಸ್ಥಲಚಕ್ರವರ್ತಿ ಸಂಪಾದನೆಯ ಶ್ರೀ ಚನ್ನಂಜೆದೇವರು ಸೇರಿಸಿದ "ಮಿಶ್ರಸ್ತೋತ್ರದ ವಚನಗಳು"–ವಚನವಾಙ್ಮಯದ ವಿಶಿಷ್ಟ ರಚನಾರೀತಿಯನ್ನು ಅರುಹುತ್ತಿವೆ. ಪರವಸ್ತುವಿನ ಮಹಿಮಾವರ್ಣನ, ಶರಣರ ಪರಸ್ಪರ ಗುಣಕಥನ– ಇವುಗಳನ್ನು ತಿಳಿಯಲು ಈ ವಚನಸಂಕಲನಗಳು ಸಹಾಯಕವಾಗಿವೆ. ನಾಂದ್ಯ, ಗದ್ಯ, ಕಂದ, ಶಾರದ. ದಂಡಕ, ತ್ರಿವಿಧಿ, ವಾರ್ಧಕ–ಮೊದಲಾದ ಪ್ರಕಾರಗಳಲ್ಲಿ ಶರಣಕವಿಗಳು ಹೃದಯಂಗಮವಾದ ಭಕ್ತಿಪ್ರೇರಕ ಸ್ತೋತ್ರಸಾಹಿತ್ಯವನ್ನು ಸೃಷ್ಟಿಸಿರುತ್ತಾರೆ.

---

* ಷಟ್ಸ್ಥಲಜ್ಞಾನ ಸಾರಾಮೃತ ॥ ೨ ॥

ಹದಿನೇಳನೇ ಶತಮಾನದ ಮಹಾಕವಿ ಷಡಕ್ಷರದೇವರು ಶ್ರೀ ಶಂಕರಾಚಾರ್ಯರಂತೆ ಸಂಸ್ಕೃತಭಾಷೆಯಲ್ಲಿ ಗಂಭೀರವೂ ಮನೋಹರವೂ ಆದ ಸ್ತೋತ್ರಗಳನ್ನು ರಚಿಸಿರುತ್ತಾರೆ.

ಬ್ರಾಹ್ಮಣಕವಿಗಳು ಮತ್ತು ಹರಿದಾಸರೂ ಕೂಡ ಸ್ತೋತ್ರಸಾಹಿತ್ಯಪ್ರಪಂಚಕ್ಕೆ ವಿಶೇಷವಾದ ಕಾಣಿಕೆಯನ್ನು ಸಲ್ಲಿಸಿರುತ್ತಾರೆ.

"ನೀನ್ಯಾಕೋ ನಿನ್ನ ಹಂಗ್ಯಾಕೋ
ನಿನ್ನ ನಾಮದ ಬಲವೊಂದಿದ್ದರೆ ಸಾಕೋ !"

ಎಂದು ವ್ಯಾಜ ನಿಂದಾಸ್ತುತಿಯನ್ನು ಮಾಡಿ ಪರಮಾತ್ಮನ ನಾಮಸಂಕೀರ್ತನದ ಶ್ರೇಷ್ಠತೆಯನ್ನು ಮನಗಾಣಿಸಿದ್ದಾರೆ.

ಬಸವೇಶ್ವರರನ್ನು ಕುರಿತ ಸ್ತುತಿಮುಕ್ತಾವಳಿಯನ್ನು ಬಿಟ್ಟರೆ, ಅಷ್ಟೇಮಟ್ಟಿಗೆ ವಿಪುಲವಾದ ಸ್ತೋತ್ರಸಾಹಿತ್ಯ ತೋಂಟದ ಶ್ರೀ ಸಿದ್ಧಲಿಂಗೇಶ್ವರರ ಬಗೆಗೆ ದೊರಕುತ್ತದೆ ಎಂದು ತಿಳಿಸಿದರೆ ಅತಿಶಯವೆನಿಸದು. ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯಸಂಬಂಧದಲ್ಲಿ ಪ್ರಾಚೀನ, ಆಧುನಿಕ ಕವಿಜನರ ಕಾಣಿಕೆ ಪರಿಗಣನೀಯವೂ ಮಹತ್ವಪೂರ್ಣವೂ ಆದುದಾಗಿದೆ. ಸ್ವಾಮಿಯ ಮಹತ್ವ, ಲೀಲೆಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿ ಭಕ್ತಿಯನ್ನು ಒಡಮೂಡಿಸುವುದು ಈ ರಚನೆಗಳ ಉದ್ದೇಶವಾಗಿದೆ.

## ವಚನಸಾಹಿತ್ಯದ ಪುನರುಜ್ಜೀವನಯುಗದ ಷಟ್ಸ್ಥಲಸುಧಾಮೂರ್ತಿ

ಬಸವಾದಿ ಪ್ರಮಥರು ತಮ್ಮ ನಡೆ-ನುಡಿಯಿಂದ ಬೆಳಗಿದವರು. ಅಸಂಖ್ಯಾತವಾಗಿ ವಚನಸೃಷ್ಟಿ ನಡೆದಿದೆ ೧೨ನೇ ಶತಮಾನದಲ್ಲಿ. ಈ ವಚನಸೃಷ್ಟಿಯ ಕಾರ್ಯವನ್ನು ೧೫ನೇ ಶತಮಾನದಲ್ಲಿ ಬಂದ ಶಿವಾನುಭಾವಿಗಳು ಮುಂದುವರಿಸಿದ್ದಾರೆ. ವಚನಗಳನ್ನು ಸ್ಥಲಕಟ್ಟಿಗೆ ಸಂಬಂಧಿಸಿದಂತೆ ಜೋಡಿಸಿದ್ದಾರೆ. ಹಲವಾರು ದೃಷ್ಟಿಯಿಂದ ಸಂಕಲಿಸಿದ್ದಾರೆ. ಸಂಪಾದಿಸಿದ್ದಾರೆ. ಈ ಬಗೆಯ ಕಾರ್ಯದಿಂದ ವಚನವಾಙ್ಮಯಕ್ಕೆ ನವೀನಚೇತನ ದೈವೀಸೌಂದರ್ಯ ಲಭಿಸಿದೆ.

೧೫ ನೆಯ ಶತಮಾನದ ಸ್ವತಂತ್ರ ವಚನಕಾರರಲ್ಲಿ ತೋಂಟದ ಸಿದ್ಧಲಿಂಗೇಶ್ವರರು ಅತ್ಯಂತ ಪ್ರಮುಖರಾಗಿದ್ದಾರೆ. ಇವರ ವಚನಗ್ರಂಥದ ಹೆಸರು 'ಷಟ್ಸ್ಥಲಜ್ಞಾನ ಸಾರಾಮೃತ.' ಶ್ರೀ ಸಿದ್ಧಲಿಂಗಶಿವಯೋಗಿಗಳವರು ಕರುಣಿಸಿರುವ ಷಟ್ಸ್ಥಲಸುಧಾ ಸಾಹಿತ್ಯವಿದು. ಈ ಗ್ರಂಥದಲ್ಲಿ ೭೦೧ ವಚನಗಳಿವೆ. ವಚನಗ್ರಂಥದ ಹೆಸರೇ ತಿಳಿಸುವಂತೆ ಷಟ್ಸ್ಥಲಸಂಬಂಧದ ಘನವಾದ ವಿಷಯನಿರೂಪಣೆ ಇವರ ವಚನಗಳಲ್ಲಿದೆ. ತತ್ತ್ವಾನು ಭಾವಿಗಳಿಗೆ, ಆಚಾರಧರ್ಮ ಸಂಪನ್ನರಿಗೆ ಶ್ರೀ ಸಿದ್ಧಲಿಂಗೇಶ್ವರರ ವಚನಗಳು ಸುಂದರವಾಗಿ

‡ ನೋಡಿ : 'ಸಿದ್ಧಲಿಂಗಸ್ತವನಮ್' ಇದೇ ಗ್ರಂಥದ ಪುಟ : ೮.

ತೋರುತ್ತವೆ. ವಚನಸಾಹಿತ್ಯದ ಪುನರುಜ್ಜೀವನಯುಗದ ಷಟ್ಸ್ಥಲಸುಧಾಮೂರ್ತಿಯಾಗಿ ಸಂಪಾದನೆಯ ಪರಂಪರೆಗೆ ಶಿವತತ್ತ್ವಜ್ಯೋತಿಯಾಗಿ ತೋಂಟದ ಸಿದ್ಧಲಿಂಗೇಶ್ವರರು ಬೆಳಗಿರುವರು.*

## ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ

ತೋಂಟದ ಸಿದ್ಧಲಿಂಗೇಶ್ವರರನ್ನು ಕುರಿತ ಸ್ತೋತ್ರಸಾಹಿತ್ಯ ಅಪಾರ. ಆದರೆ ಅವುಗಳೆಲ್ಲವೂ ಚದುರಿಹೋಗಿವೆ. ಕಾಲಪುರುಷನ ದವಡೆಗೆ ಸಿಕ್ಕವೆಷ್ಟೋ! ನನ್ನ ವಿಶೇಷ ಪರಿಶೋಧನೆಯ ಪರಿಣಾಮವಾಗಿ ಲಭ್ಯವಾದ ಸಾಹಿತ್ಯದ ಸಾರಪೂರ್ಣವಾದ ರಚನೆಗಳನ್ನು ಸಂಪಾದಿಸಿ ಗ್ರಂಥರೂಪದಲ್ಲಿ ಇಲ್ಲಿ ಒದಗಿಸಿದ್ದೇನೆ.

ಸ್ಮೃತಿರೂಪಸ್ತುತಿ, ಕೇವಲಸ್ತುತಿ–ಎಂದು ಎರಡು ರೀತಿಯಲ್ಲಿ ಸ್ತುತಿಕ್ರಮವನ್ನು ಅಧ್ಯಯನದಿಂದ ತಿಳಿಯಬಹುದು. ತೋಂಟದ ಸಿದ್ಧಲಿಂಗೇಶ್ವರರ ಹೆಸರನ್ನು ನಿರ್ದೇಶ ಮಾಡಿರುವ ಸಾಹಿತ್ಯವನ್ನೆಲ್ಲ ಸಂಗ್ರಹಿಸಿ ಪ್ರಕಟಿಸುವುದು ನಮ್ಮ ಗುರಿಯಲ್ಲ. ತೋಂಟದ ಯತಿಗಳ ವ್ಯಕ್ತಿತ್ವ ಪರಿಸ್ಫುಟಗೊಳಿಸುವಂಥ ಸ್ತುತಿ ಒಂದು ಬಿಡಿಪದ್ಯದ ರೂಪದಲ್ಲಾದರೂ ಇರಬೇಕೆಂಬುದು ನಮ್ಮ ಆಶಯವಾಗಿದೆ. ಈ ಕ್ರಮದಿಂದ ಗ್ರಂಥವನ್ನು ರೂಪಿಸಿದೆ.

ಸುಪ್ರಭಾತ, ಮುಕ್ತಕ, ಪಂಚಕ, ಅಷ್ಟಕ, ನಕ್ಷತ್ರಮಾಲಿಕಾಸ್ತೋತ್ರ, ಮಂತ್ರಗಳು, ಸಾಂಗತ್ಯ, ಕಂದ, ವಚನ, ಷಟ್ಪದಿ, ಭಕ್ತಿಗೀತೆ, ಭಾವಗೀತೆ, ವೃತ್ತ, ತ್ರಿವಿಧಿ ರಗಳೆ, ಲಾವಣಿ, ಉಯ್ಯಾಲೆಪದ, ನಾಮಾವಳಿ, ಆರತಿಪದಗಳು, ಶಾಸನ – ಹೀಗೆ, ಈ ಗ್ರಂಥದ ವಿವಿಧ ಸಾಹಿತ್ಯಪ್ರಕಾರಗಳಲ್ಲಿ ತೋಂಟದ ಶ್ರೀ ಸಿದ್ಧಲಿಂಗೇಶ್ವರರ ಸ್ವರೂಪ ದರ್ಶನ ಸುಪ್ರಕಾಶಗೊಂಡಿದೆ.

---

* "ಕಗ್ಗರೆಯ ಸಮೀಪದಲ್ಲಿರುವ ನಾಗಿಣೀನದಿಯ ತೀರದಲ್ಲಿ ತೋಂಟದೊಳಗೆ ಬಹಳಕಾಲ ಶಿವಯೋಗದಲ್ಲಿ ಇದ್ದುದರಿಂದ ಈತನಿಗೆ 'ತೋಂಟದ' ಎಂಬ ವಿಶೇಷಣವು ರೂಢಿಯಾಗಿಬಂದಿದೆ. ಇವನು ಕುಣಿಗಲಿಗೆ ಸಮೀಪದಲ್ಲಿರುವ ಎಡೆಯೂರಲ್ಲಿ ಸಮಾಧಿಯನ್ನು ಹೊಂದಿದನು. ಆ ಊರಲ್ಲಿ ಈತನ ಜ್ಞಾಪಕಾರ್ಥವಾಗಿ ಕಟ್ಟಿಸಿದ ಸಿದ್ಧಲಿಂಗೇಶ್ವರ ದೇವಸ್ಥಾನವು ಈಗಲೂ ಇದೆ. ಈತನು ವೀರಶೈವರಲ್ಲಿ ಬಹಳ ಪ್ರಸಿದ್ಧನಾದ ಗುರು. ಈತನ ಚರಿತ್ರೆಯನ್ನು ಕುರಿತು ಹಲವು ಗ್ರಂಥಗಳು ಹುಟ್ಟಿವೆ. ಮೇಲೆ ಹೇಳಿದ ಸಿದ್ಧಲಿಂಗೇಶ್ವರ ದೇವಸ್ಥಾನದ ಪ್ರಾಕಾರದಲ್ಲಿ ೧೫೦೦ರಲ್ಲಿ ಬರೆದ ಒಂದು ಶಿಲಾಶಾಸನವಿದೆ. ಇದರಲ್ಲಿ ಈತನ ಮಹಿಮೆಯನ್ನು ವಿಶೇಷವಾಗಿ ಕೊಂಡಾಡಿ, ಈತನ ಶಿಷ್ಯರಲ್ಲಿ ಕೆಲವರ ಹೆಸರನ್ನು ಹೇಳಿ ಈತನಿಗೋಸ್ಕರ ಕೆಲವರು ಭಕ್ತರು ಎಡೆಯೂರಲ್ಲಿ ಒಂದು ಕಲ್ಲುಮಠವನ್ನು ಕಟ್ಟಿಸಿದಂತೆ ಹೇಳಿದೆ"– ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ.

— ಕರ್ಣಾಟಕ ಕವಿಚರಿತೆ II

# ಕವಿ - ಕೃತಿಗಳ ಬಗೆಗೆ ಕೆಲವು ಟಿಪ್ಪಣಿಗಳು

## ೧ ಘನಲಿಂಗಿದೇವ (೧೪೮೦)

ವಚನರಚನಾಸಂಪ್ರದಾಯ ೧೫ನೇ ಶತಮಾನದಲ್ಲಿ ಮತ್ತೊಮ್ಮೆ ಚೆನ್ನಾ ಬೆಳಗಲು ಕಾರಣಕರ್ತರಾದ ಸ್ವತಂತ್ರವಚನಕಾರರ ವಿರಳಪಂಕ್ತಿಯಲ್ಲಿ ಘನಲಿಂಗಿದೇವ ಕಂಡುಬರುತ್ತಾರೆ. ಈ ಶರಣರ ಸುಕ್ಷೇತ್ರ ಸುತ್ತೂರು. ತೋಂಟದ ಸಿದ್ಧಲಿಂಗಪ್ರಭು ಕರುಣಪ್ರಸಾದವನ್ನು ಪಡೆದ ಸ್ವಯಲಿಂಗಾನುಭಾವಿ ಘನಲಿಂಗಿದೇವ. ಪರಮಾ ಜ್ಞಾನದಿಂದ ತಮ್ಮ ತನು ಮನ ಧನಗಳನ್ನು ಏಕಚಿತ್ತದಿಂದ ಸಿದ್ಧಲಿಂಗ ಮಹಾ ಪ್ರಭುವಿನಲ್ಲಿ ಈ ಶರಣರು ಸಮರ್ಪಿಸಿ ನಿತ್ಯತೃಪ್ತರಾಗಿದ್ದಾರೆ.

ಇವರ ವಚನಗಳು ಸದ್ಯಕ್ಕೆ ೬೫ ದೊರಕಿವೆ. ಸತಿ ಪತಿಭಾವದ ವಚನ ದೃಷ್ಟಿಯಿಂದ ಅಕ್ಕಮಹಾದೇವಿ, ಗಜೇಶಮಸಣಯ್ಯನವರ ವಚನಗಳನ್ನು ಬಿಟ್ಟ ಶರಣವೆಣ್ಣಾದ ಘನಲಿಂಗಿಯ ವಚನಗಳು ಅತ್ಯುತ್ಕೃಷ್ಟವಾಗಿವೆ. ವೀರಶೈವ ಧರ್ಮ-ದರ್ಶನದ ಸಾರೋದ್ದೇಶವನ್ನು ಇವರ ವಚನಗಳು ಚಿತ್ತಾಕರ್ಷಕ ಶೈಲಿಯಲ್ಲಿ ಮನಗಾಣಿಸಿವೆ. ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ.* ವಿರಕ್ತತೋಂಟದಾರ್ಯ ಸಿದ್ಧೇಶ್ವರ ಪುರಾಣ† – ಈ ಕಾವ್ಯಗಳಲ್ಲಿ ಘನಲಿಂಗಿದೇವರ ಸಂಗತಿ ಸುಳಿದುಬಂದಿದೆ.

ತೋಂಟದ ಸಿದ್ಧಲಿಂಗೇಶ್ವರರು ಘನಲಿಂಗಿದೇವರ ದೃಷ್ಟಿಯಲ್ಲಿ 'ನಿಷ್ಕಳಬ್ರಹ್ಮ' 'ನಿರಂಜನಬ್ರಹ್ಮ', 'ತೋಂಟದ ಅಲ್ಲಮ'. ಆ 'ಪರಮಾರಾಧ್ಯ'ರ ಬಣ್ಣನೆ ಇವರ ಹಲವಾರು ವಚನಗಳಲ್ಲಿ ಪ್ರಾಸಂಗಿಕವಾಗಿ ಬಂದರೂ ಪರಮಗಂಭೀರವಾಗಿ ಒಡಮೂಡಿ

ನಿದರ್ಶನಕ್ಕೆ:—

"ಮಹಾಗುರು ಸಿದ್ಧಲಿಂಗಪ್ರಭುವಿನ
ಗರ್ಭಾಂಬುಧಿಯಲ್ಲಿ ಜನಿಸಿದ ಬಾಲಕಿಯಯ್ಯ ನಾನು."

"ಮಹಾಗುರು ಸಿದ್ಧೇಶ್ವರಪ್ರಭುವಿನ ಚರಣಮಂ
ನಾನು ಕರಸ್ಥಲದಲ್ಲಿ ಪಿಡಿದು ಪೂಜೆಯಂ ಮಾಡಲೊಡನೆ
ಎನ್ನ ತನುವೇ ಪಂಚಬ್ರಹ್ಮ, ಪ್ರಾಣವೇ ಪರಬ್ರಹ್ಮವಾಯಿತು;
ನಿವೃತ್ತಿಯ ಬಟ್ಟೆ ನಿರ್ಮಲವಾಯಿತು.
ಉಯ್ಯಾಲೆಯ ಮಣೆ ನೆಲೆಗೆ ನಿಂದಂತೆ ಆದೆನಯ್ಯಾ
ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನಾ."

* ೬೩ – ೪೭. † ೧೦ – ೫.

"ಸಂಗಮಕ್ಷೇತ್ರದ ರತ್ನಮಂಟಪದಲ್ಲಿ ನೆಲಸಿಪ್ಪ
ತೋಂಟದ ಅಲ್ಲಮನೆಂಬ ಪರಬ್ರಹ್ಮದ
ಬೆಳಗಿನ ಪ್ರಭೆಯ ಮೊತ್ತಮಂ ಕಂಡು
ಆ ತೋಂಟದ ಅಲ್ಲಮನೆಂಬ ಪರಬ್ರಹ್ಮದ
ದಿವ್ಯಶ್ರೀಚರಣಮಂ
ಭಾವಪುಷ್ಪಗಳೆಂಬ ಜಾಜಿ–ಮಲ್ಲಿಗೆ, ಕೆಂದಾವರೆಯಲ್ಲಿ
ಪೂಜೆಯಂಮಾಡಿ
ಜೀವನ್ಮುಕ್ತಿಯಾದುದೀಗ ನಿಜವಿರಕ್ತಿ."

ಪ್ರಕೃತಗ್ರಂಥದ ೭೯ನೇ ಪುಟದಲ್ಲಿ ಕಾಣಿಸಿರುವ ಘನಲಿಂಗಿದೇವರ ವಚನವು ಗಾಢವಾದ ಗುರುಭಕ್ತಿಭಾವದಿಂದ ತುಂಬಿಬಂದಿದೆ. ಸಿದ್ಧಲಿಂಗೇಶ್ವರರನ್ನು ಕುರಿತ 'ತೋಂಟದ ಅಲ್ಲಮ' ಎಂಬ ಘನಲಿಂಗಿದೇವರ ಪ್ರಯೋಗವಂತೂ ಅತ್ಯಂತ ಅಪೂರ್ವವಾದುದು. ಸದ್ಭಕ್ತ, ಸಾಹಿತಿ, ಸಂಶೋಧಕ–ಸರ್ವರ ದೃಷ್ಟಿಯಿಂದಲೂ ಈ ವಚನ ಮನನೀಯವಾಗಿದೆ.

### ೨ ಗುಮ್ಮಳಾಪುರದ ಸಿದ್ಧಲಿಂಗದೇವರು (೧೫೦೦)

ಇವರು ತೋಂಟದ ಸಿದ್ಧಲಿಂಗೇಶ್ವರರ ವರಪುತ್ರರು. ಇವರ ವಿದ್ಯಾಗುರುಗಳು ಬೋಳಬಸವೇಶ್ವರರು.* ಷಟ್ಸ್ಥಲ ಲಿಂಗಾಂಗ ಸಂಬಂಧದ ನಿರ್ವಚನ, ಶೂನ್ಯಸಂಪಾದನೆ- ಇವರ ಕೃತಿಗಳು. ಷಟ್ಸ್ಥಲಾಚಾರ ಸಮುದ್ಧರಣ ಕಾರ್ಯದಲ್ಲಿ ಪೆಸರ್ವಡೆದ ಏಳುನೂರು ಮಂದಿ ವಿರಕ್ತರಲ್ಲಿ ಗುಮ್ಮಳಾಪುರದ ಸಿದ್ಧಲಿಂಗದೇವರು ಒಬ್ಬರು. ಸುಕ್ಷೇತ್ರ ಎಡೆಯೂರು ದೇವಾಲಯದ ಶಾಸನದಲ್ಲಿಯೂ ವಿರೂಪಾಕ್ಷಪಂಡಿತನ ಚೆನ್ನಬಸವ ಪುರಾಣದಲ್ಲಿಯೂ ಈ ಶರಣರ ಹೆಸರು ಉಕ್ತವಾಗಿದೆ. ಇವರ ಶೂನ್ಯಸಂಪಾದನೆ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಸಂಸ್ಥೆಯಿಂದ ಇದೀಗ ಬೆಳಕುಕಂಡಿದೆ.

### ೩ ಗೂಳೂರು ಸಿದ್ಧವೀರಣ್ಣೊಡೆಯರು (೧೫೧೦)

ತೋಂಟದ ಯತಿಗಳ ಶಿಷ್ಯಪರಂಪರೆಯಲ್ಲಿ ಇವರು ಪ್ರಸಿದ್ಧರಾಗಿದ್ದಾರೆ. ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆ ಶರಣ ಜನರ ಕಿವಿಗೆ ಇನಿದೆನಿಸುವಂತೆ ಅಖಿಲ ಪುರಾತನರ ವಚನಗಳಿಂದ ಸಂಗ್ರಹಿಸಿ ಪವಣಿಸಿರುವ ಮುತ್ತಿನಹಾರವಾಗಿದೆ.

ಶೂನ್ಯಸಂಪಾದನೆಯ ಪ್ರಥಮೋಪದೇಶಭಾಗದಲ್ಲಿಯೇ ತಮ್ಮ ಗುರುವಿನ ಗುರುವಾದ ತೋಂಟದ ಯತಿಗಳನ್ನು ಈ ಪರಿಯಲ್ಲಿ ಗೂಳೂರು ಸಿದ್ಧವೀರಣಾರ್ಯರು ಸ್ಮರಿಸಿರುತ್ತಾರೆ:—

* ಇವರಿಗೆ ಶಿವಪೂಜೆಯಾರ್ಯ ಎಂಬ ಇನ್ನೊಂದು ಹೆಸರಿದೆ.

"ಶ್ರೀಮತ್ಪರಾತ್ಪರ ಪರಶಿವ ನಿತ್ಯನಿರ್ಮಲ ನಿರಘ ನಿರಸೂಯ ಅನಿರ್ವಾಚ್ಯ ಪರಂಜ್ಯೋತಿಸ್ವರೂಪ ಷಟ್ಸ್ಥಲಜ್ಞಾನಪ್ರಭಾಪುಂಜರಂಜಿತ ಸಕಲಭಕ್ತಹೃತ್ಕಮಲ ಕರ್ಣಿಕಾವಾಸ ಶರಣಜನಮುಕ್ತಿಪ್ರದಾಯಕ ಅಖಿಳಜಗದಾರಾಧ್ಯರಪ್ಪ ತೋಂಟದ ಸಿದ್ಧಲಿಂಗೇಶ್ವರ..."

೪ ಶಾಂತೇಶ (೧೫೬೦)

ಈ ಕವಿಗೆ ಶಾಂತ, ಶಾಂತದೇಶಿಕ ಎಂಬ ಹೆಸರುಗಳೂ ಇವೆ. ನೆಲೆ: ಗುಬ್ಬಿ. ತಂದೆ: ಭಾವಚಿಂತಾರತ್ನ, ವೀರಶೈವಾಮೃತ ಮಹಾಪುರಾಣಗಳ ಕರ್ತೃವಾದ ಗುಬ್ಬಿಯ ಮಲ್ಲಣಾರ್ಯ. ಗುರು: ಚಂದ್ರಶೇಖರ. ತನ್ನ ಗುರು ನಿರೂಪಿಸಿದ ಬೋಧೆಯನ್ನು ಆಧರಿಸಿ, ಆತನ ಆಜ್ಞೆಯ ಮೇರೆಗೆ 'ಸಿದ್ಧೇಶ್ವರ ಪುರಾಣ'ವನ್ನು ತಾನು ಬರೆದುದಾಗಿ ಶಾಂತೇಶಕವಿ ತಿಳಿಸಿರುವರು. ಸಿದ್ಧಲಿಂಗಶಿವಯೋಗಿಗಳ ಚರಿತ್ರೆಯಜೊತೆಗೆ ಸೃಷ್ಟಿವಿಚಾರ, ಧರ್ಮಬೋಧೆ, ಶಿವಲೀಲೆಗಳು, ಷಟ್ಸ್ಥಲಸಿದ್ಧಾಂತ ಈ ಪುರಾಣದಲ್ಲಿ ಪ್ರತಿಪಾದಿತವಾಗಿವೆ.

೫ ವಿರಕ್ತ ತೋಂಟದಾರ್ಯ (೧೫೬೦)

ವಿರಕ್ತ ತೋಂಟದಾರ್ಯ, ಮರಿ ತೋಂಟದಾರ್ಯ – ಎಂಬ ಹೆಸರುಗಳು ಒಬ್ಬರಿಗೇ ಅನ್ವಯವಾಗುತ್ತದೆ ಎಂದು ಕೆಲವರು ಭಾವಿಸಿದ್ದಾರೆ ; ಹಾಗೆ ಬರೆದಿದ್ದಾರೆ. ಇದು ಮೊದಲಿನಿಂದಲೂ ಇರುವ ತಪ್ಪು ಗ್ರಹಿಕೆ. ವಿರಕ್ತ ತೋಂಟದಾರ್ಯನ ಸಿದ್ಧೇಶ್ವರಪುರಾಣ ಎಂದು ತಿಳಿಸುವ ಬದಲು, ಮರಿತೋಂಟದಾರ್ಯ ವಿರಚಿತ ಸಿದ್ಧೇಶ್ವರಪುರಾಣ ಎಂದು ಎಷ್ಟೋ ಕಡೆ ಕರೆದಿರುವುದುಂಟು. ವಿರಕ್ತ ತೋಂಟದಾರ್ಯರೇ ಬೇರೆ, ಮರಿತೋಂಟದಾರ್ಯರೇ ಬೇರೆ.

ಮರಿತೋಂಟದಾರ್ಯರು ೧೭೫೦ ರಲ್ಲಿದ್ದ ಕಿರಿಬಸವಪ್ಪನಾಯಕನ ಆಸ್ಥಾನ ವಿದ್ವಾಂಸರು ; ಶಾಸ್ತ್ರಸಂಪನ್ನರು. 'ವೀರಶೈವಾನಂದಚಂದ್ರಿಕೆ'– ಎಂಬ ಸಂಸ್ಕೃತ ಗ್ರಂಥವನ್ನು ವಿರಚಿಸಿರುವರು. ಇವರು ಸಿದ್ಧಾಂತ ಶಿಖಾಮಣಿಗೆ ಟೀಕೆಯನ್ನು ಬರೆದಿರುತ್ತಾರೆ.

ವಿರಕ್ತ ತೋಂಟದಾರ್ಯರು ತೋಂಟದ ಸಿದ್ಧೇಶ್ವರಪುರಾಣ, ಚಿದಾನಂದ ಸಿಂಧು, ಕರ್ಣಾಟಕ ಶಬ್ದಮಂಜರಿ, ಸಿದ್ಧಲಿಂಗೇಶ್ವರ ಶತಕ, ಪಾಲ್ಕುರಿಕೆ ಸೋಮೇಶ್ವರ ಪುರಾಣ ಮೊದಲಾದ ಕೃತಿಗಳನ್ನು ವಿರಚಿಸಿರುವರೆಂದು ತಿಳಿದುಬರುತ್ತಿದೆ. ಇವುಗಳಲ್ಲದೆ ಸಪ್ತಕಾವ್ಯಕರ್ತೃ ಗುರುಬಸವೇಶ್ವರನ 'ಮನೋವಿಜಯ'ವೆಂಬ ತತ್ತ್ವಕಾವ್ಯಕ್ಕೂ ಮಾಯಿದೇವಪ್ರಭುವಿನ ಶತಕತ್ರಯಕ್ಕೂ ಇವರು ಟೀಕೆಯನ್ನು ಬರೆದಿರುತ್ತಾರೆ.

"ಇವರಿಗೆ ತೋಂಟದಾರ್ಯ, ತೋಂಟದ ಸಿದ್ಧಲಿಂಗ, ತೋಂಟದ ಸಿದ್ಧಲಿಂಗ ಶಿವಯೋಗೀಂದ್ರ ಎಂಬುದಾಗಿ ರೂಢವಾದ ಹೆಸರುಗಳಿದ್ದವು–ಎಂದು ಶ್ರೀ ಎಸ್. ಆರ್. ಕರಿಬಸವಶಾಸ್ತ್ರಿಗಳು ಪಾಲ್ಕುರಿಕೆ ಸೋಮೇಶ್ವರ ಪುರಾಣದ ಪೀಠಿಕೆಯಲ್ಲಿ ತಿಳಿಸಿದ್ದಾರೆ.

ಸಿದ್ಧಲಿಂಗ ಶಿವಯೋಗಿ, ಸಿದ್ಧಲಿಂಗದೇಶಿಕೇಂದ್ರ, ಸ್ವತಂತ್ರ ಸಿದ್ಧಲಿಂಗೇಶ್ವರ, ಗುಮ್ಮಳಾಪುರದ ಸಿದ್ಧಲಿಂಗೇಶ್ವರ, ತೋಂಟದಾರ್ಯ, ವಿರಕ್ತ ತೋಂಟದಾರ್ಯ, ಮರಿ ತೋಂಟದಾರ್ಯ – ಈ ಮೊದಲಾದ ಹೆಸರುಗಳು ವೀರಶೈವಸಾಹಿತ್ಯದಲ್ಲಿ ಪ್ರೌಢ ಅಭ್ಯಾಸಿಗಳ ದೃಷ್ಟಿಗೆ ನಿರಂತರ ಗೋಚರವಾಗುತ್ತವೆ. ಆದರೆ ಈ ಹೆಸರುಗಳ ಬಗೆಗೆ ಎಚ್ಚರದಿಂದ ಅವಗಾಹನೆಮಾಡಿ ಖಚಿತಪಡಿಸಿಕೊಂಡು ಕವಿ ಕೃತಿ ಕಾಲ ನಿರ್ದೇಶಮಾಡುವುದು ಸೂಕ್ತ. ಸಾಹಿತ್ಯಚರಿತ್ರೆಯ ದೃಷ್ಟಿಯಿಂದಲೂ ಈ ಅಂಶ ಗಮನಾರ್ಹವಾದುದು.

## ೬ ವಿರೂಪಾಕ್ಷಪಂಡಿತ (೧೫೮೫)

ಚನ್ನಬಸವಪುರಾಣ – ಎಂದು ಹೆಸರಿದ್ದರೂ ಹರಶರಣರ ಚರಿತೆಯ ನಿರೂಪಣೆ ಸಂಪ್ರದಾಯವಾಗಿ ಈ ಕಾವ್ಯದಲ್ಲಿ ಬಂದಿದೆ. ಪರಶಿವನ ಲೀಲಾಕಥನ, ಶಿವತತ್ತ್ವ ವಿಚಾರಗಳು ಸುರಮ್ಯವಾಗಿ ಮೂಡಿವೆ. ಈ ಕಾವ್ಯವನ್ನು ಚೆನ್ನಬಸವಣ್ಣನವರ ಜೀವನ ಚರಿತ್ರೆಗೆ ಸಂಬಂಧಿಸಿದ ಕೃತಿ ಎಂದೆನ್ನುವುದಕ್ಕಿಂತಲೂ ವೀರಶೈವ ತತ್ತ್ವಸಿದ್ಧಾಂತಗಳಿಂದ ತುಂಬಿದ ಸತ್ಕಾವ್ಯವೆಂದು ಪರಿಗಣಿಸಬಹುದು.

## ೭ ಸಿದ್ಧೇಶ್ವರ ತ್ರಿವಿಧಿ (೧೬೦೦)

ಇದರ ಕರ್ತೃ ಯಾರು ಎಂಬುದರ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಸದ್ಧರ್ಮ ದೀಪಿಕೆಯ ಸಂಪಾದಕರಾಗಿದ್ದ ಶ್ರೀ ಚೆನ್ನಮಲ್ಲಪ್ಪನವರು (ಶ್ರೀ ಚೆನ್ನಮಲ್ಲಿಕಾರ್ಜುನ) ಈ ತ್ರಿವಿಧಿಯ ಕರ್ತೃ 'ನಂದಿ ಕವಿ' ಎಂದಿರುತ್ತಾರೆ. 'ಕವಿಚರಿತ್ರೆಯ ಅನುಕ್ತ ಕೃತಿ ಸೂಚಿ'ಯಲ್ಲಿ ಸಿದ್ಧೇಶ್ವರತ್ರಿವಿಧಿಯ ಅಂಕಿತ ಚೆನ್ನಬಸವ ಎಂದಿದೆ.* ಇದನ್ನು ಕಿರುಕೃತಿ ರೂಪದಲ್ಲಿ ಮೊದಲು ಪ್ರಕಟಿಸಿದ ಕೀರ್ತಿ ಪೂಜ್ಯರಾದ ಶ್ರೀ ಚೆನ್ನಮಲ್ಲಪ್ಪನವರಿಗೆ ಸಲ್ಲುತ್ತದೆ. ಈ ಮಹನೀಯರ ಅಮೂಲ್ಯವಾದ ಅಭಿಪ್ರಾಯವನ್ನೇ ಕೃತಿಸಂಬಂಧವಾಗಿ ಇಲ್ಲಿ ಸಾದರಪಡಿಸುವೆವು :—

"ಇದು ಶ್ರೀ ನಿರಂಜನ ಜಗದ್ಗುರು ಅಲ್ಲಮಪ್ರಭುದೇವರ ಪರಂಪರೆಯ ೧೯ನೆಯ ಗುರುಗಳಾದ ತೋಂಟದ ಶ್ರೀ ಸಿದ್ಧಲಿಂಗಸ್ವಾಮಿಗಳವರನ್ನು ಕುರಿತು ಅವರ ಹಿಂದಿನವರಾದ "ನಂದಿ" ಎಂಬ ವಿರಕ್ತಮೂರ್ತಿಗಳು ಬೇಡಿಕೊಂಡ ತ್ರಿವಿಧಿರೂಪವಾದ ಪದ್ಯಗಳ ಪುಸ್ತಕವು. ಇದನ್ನು ಓದಿ ಆಚರಿಸುವ ಭಾರವು ಜನತೆಯ ಮೇಲೆ ಇರುವುದು. ಉತ್ತಮ ವಿಷಯಗಳನ್ನೊಳಗೊಂಡಿದೆ ಎಂಬುದು ಓದುಗರಿಗೆ ಗೊತ್ತಾಗದಿರಲಾರದು. ಚಿಕ್ಕಂದಿನಿಂದಲೂ ಇದು ಮುದ್ರಣವಾಗತಕ್ಕ ಪುಸ್ತಕವೆಂದು ಯೋಚಿಸಿಕೊಂಡು ಇದ್ದುದು ಈಗ ಸಾಫಲ್ಯವಾಯಿತು."

---

* ಪುಟ ನೋಡಿ : ೭೭.

## ೮ ಸಿದ್ಧೇಶ್ವರ ಪವಾಡ ರಗಳೆ

ಸಿದ್ಧೇಶ್ವರ ಪವಾಡರಗಳೆಯ ಕರ್ತೃವಿನ ವಿಚಾರ ಅಧಿಕೃತವಾಗಿ ಇನ್ನೂ ತಿಳಿ ಬಂದಿಲ್ಲ. 'ನಿರಂಜನಲಿಂಗಾ'– ಎಂಬ ಅಂಕಿತ ಈ ರಗಳೆಯ ಕೊನೆಯಲ್ಲಿರುವುದರಿ ಇದು ವಿರಕ್ತ ತೋಂಟದಾರ್ಯರಿಂದ ವಿರಚಿತವಾದುದು ಎಂಬ ಅಭಿಪ್ರಾಯ ಕೆಲವ ಸಹಜವಾಗಿ ಬಂದಿದೆ. ಶ್ರೀ ಫ. ಗು. ಹಳಕಟ್ಟಿಯವರು 'ಶ್ರೀ ತೋಂಟದಾರ್ಯರ ರಗಳೆ' ಎಂಬ ಹೆಸರಿನಿಂದ ೧೯೨೬ರಲ್ಲಿ ಇದನ್ನು ಪ್ರಕಟಿಸಿರುತ್ತಾರೆ. ರಗಳೆಯ ಕೊನೆಯ 'ಸಿದ್ಧೇಶ್ವರ ಪವಾಡದ ರಗಳೆ'– ಎಂದು ಸೂಚಿತವಾಗಿರುವುದರಿಂದ ಆ ಹೆಸರನ್ನೇ ಇ ಕೊಡಲಾಗಿದೆ; ಪರಿಷ್ಕರಿಸಿ ಪ್ರಕಟಿಸಿದೆ. ಸಿದ್ಧಲಿಂಗೇಶ್ವರರು ಮೆರೆದ ೭೫ ಪವಾಡ ಈ ರಗಳೆಯಲ್ಲಿ ಕಂಡುಬಂದಿವೆ.

## ೯ ಎಳಂದೂರು ಹರೀಶ್ವರ (೧೬೦೬)

ಕವಿಚರಿತೆಕಾರರು ತಿಳಿಸಿರುವ ಕಾಲವನ್ನು ಮೇಲೆ ಕಾಣಿಸಿದೆ. ಶ್ರೀ ಪ್ರಭುದೇವ ಪುರಾಣವನ್ನು 'ಪ್ರಾಸರತ್ನಾಕರ'ವೆಂದು ಕವಿಯೇ ಕರೆದಿರುವರು. ತಮ್ಮ ಗುರು ಸಿ ವೀರೇಶ್ವರರ ಅಪ್ಪಣೆಯಂತೆ ಈ ಪುರಾಣಕಾವ್ಯವನ್ನು ರಚಿಸಿರುವುದಾಗಿ ಕವಿ ತಿಳಿಸಿದ್ದಾ ಈ ಸಿದ್ಧವೀರೇಶ್ವರರು ತೋಂಟದ ಯತಿಗಳ ಶಿಷ್ಯರಾದ ಬೋಳಬಸವೇಶ್ವರ ಕಾರುಣ್ಯದಿಂದ ಷಟ್ಸ್ಥಲಬ್ರಹ್ಮವನ್ನು ತಿಳಿದವರು. ಇಂಥ ಮಹಾಗುರುವಿನ ದ ಪಾತ್ರನಾಗಿ ಎಳಂದೂರು ಹರೀಶ್ವರ ಕವಿ ಬೆಳಗಿದ್ದಾರೆ.

## ೧೦ ಸಿದ್ಧನಂಜೇಶ (೧೬೫೦)

ಈ ಕವಿಗೆ ಚಿಕ್ಕನಂಜೇಶನೆಂಬ ಇನ್ನೊಂದು ಹೆಸರಿದೆ. ಗುರುರಾಜಚಾರಿತ್ರ ರಾಘವಾಂಕಚಾರಿತ್ರ, ಭಾವರತ್ನಾಭರಣ – ಮೊದಲಾದವು ಸಿದ್ಧನಂಜೇಶನ ಕೃತಿಗಳ 'ಭಾವರತ್ನಾಭರಣ' ತೋಂಟದ ಸಿದ್ಧಲಿಂಗಯತಿಗಳನ್ನು ಕುರಿತ ಕೃತಿ. ಇದು ಇನ್ನ ದೊರಕಿಲ್ಲ. ಗುಬ್ಬಿಯ ಮಲ್ಲಣಾರ್ಯರ ವೀರಶೈವಾಮೃತ ಮಹಾಪುರಾಣದಿ ಸಿದ್ಧನಂಜೇಶನು ಪ್ರಭಾವಗೊಂಡಿದ್ದಾನೆ. ವೀರಶೈವ ಕವಿಗಳು ಮತ್ತು ಗುರು ಚರಿತ್ರೆಯನ್ನು ಕುರಿತ ಈ ಕವಿಯ ಗುರುರಾಜಚಾರಿತ್ರ, ಕವಿ ಕಾಲ ಸ್ಥಳ ನಿರ್ಣಯ ದೃಷ್ಟಿಯಿಂದಲೂ ಅತ್ಯಂತ ಮಹತ್ವದ್ದಾಗಿದೆ.

ಪ್ರಕೃತಗ್ರಂಥದ ಪುಟ ೭೧ರಲ್ಲಿ ತೋಂಟದ ಸಿದ್ಧಲಿಂಗೇಶ್ವರರು ಮೆರೆದಿರು ಹಲವು ಪವಾಡಗಳ ನಿರ್ದೇಶವಿದ್ದು, ಆ ಮಹಾಗುರು ಶಿವಯೋಗ ಸಮಾಧಿಯ ನಿರ್ವಯಲಾದ ಸಂಗತಿ ಸೂಚಿತವಾಗಿದೆ.

## ೧೧ ಷಡಕ್ಷರದೇವ (೧೬೫೦)

ನೆರೆದೇಕಾದಶವರ್ಷದಲ್ಲಿಯೇ ಕವಿತಾದೇವಿಯ ಕಾರುಣ್ಯವನ್ನು ಪಡೆದ ಮಹಾ ಷಡಕ್ಷರದೇವ. ರಾಜಶೇಖರವಿಲಾಸ, ವೃಷಭೇಂದ್ರವಿಜಯ, ಶಬರಶಂಕರವಿಲಾಸ

ಪ್ರಸಿದ್ಧವಾದ ಈ ಕೃತಿಗಳನ್ನಲ್ಲದೆ ಹಲವಾರು ಭಕ್ತಿಸ್ತೋತ್ರಗಳನ್ನೂ ಈ ಕವಿ ರಚಿಸಿದ್ದಾರೆ.

'ಶ್ರೀ ಸಿದ್ಧಲಿಂಗಸ್ತವನಂ' ಕವಿಯ ಪ್ರಸನ್ನ ಗಂಭೀರಶೈಲಿ, ಕವಿತಾಸಾಮರ್ಥ್ಯ, ಭಕ್ತಿಭಾವದ ಸೋಜ್ವಲತೆಗೆ ನಿದರ್ಶನವಾಗಿದೆ. ಅಂತೆಯೇ ಈ ಗ್ರಂಥದ ಪುಟ ೬೭ರಲ್ಲಿ ಕಾಣಿಸಿರುವ ಶ್ರೀ ಸಿದ್ಧಲಿಂಗೇಶ್ವರರನ್ನು ಕುರಿತ ಕವಿಯ ಬಿಡಿಪದ್ಯಗಳು ಅನರ್ಘ್ಯ ರತ್ನಗಳಾಗಿವೆ. ಇದರಲ್ಲಿ ಮೊದಲ ಬಿಡಿಪದ್ಯಕ್ಕೆ ತೋಂಟದ ಸ್ವಾಮಿ ಪಕ್ಷವಾದ ಅರ್ಥವನ್ನೂ ತೋಟದ ಪಕ್ಷವಾದ ಅರ್ಥವನ್ನೂ ಪೂರ್ವಿಕ ಮಹನೀಯರು ನೀಡಿರುತ್ತಾರೆ.

## ೧೨ ಬಸವಲಿಂಗಕವಿ (೧೬೭೮)

"ಸರಸಕವಿತಾರಮಾಮನೋಜ್ಞಂ ಷಡಕ್ಷರದೇವನೇ ವಂದ್ಯನುಂ ಸತ್ಕಲಾನಿಧಿಜ್ಞಂ" ಉಭಯಕವಿತಾವಿಶಾರದ ಷಡಕ್ಷರದೇವನನ್ನು ಕುರಿತ ಈ ಸ್ತುತಿ ಬಸವಲಿಂಗಕವಿಯ ಕಾಲದ ದೃಷ್ಟಿಯಿಂದ ಗಮನಾರ್ಹವಾದುದು. ಪುರಾಣಕಾವ್ಯಗಳಲ್ಲಿ ಕೊಟ್ಟೂರು ಬಸವೇಶ್ವರ ಚಾರಿತ್ರಕ್ಕೆ ಒಳ್ಳೆಯ ಸ್ಥಾನವಿದೆ. ಕಥಾನಿರೂಪಣೆಯಲ್ಲಿ ಸಂಪ್ರದಾಯದ ಶೈಲಿ ಕಂಡುಬಂದರೂ ಪಾಂಡಿತ್ಯ ಪ್ರತಿಭೆಗಳೂ ಈ ಭಕ್ತಿಶೀಲಕವಿಯಲ್ಲಿ ಸಹಜವಾಗಿ ಮೇಳಗೊಂಡಿವೆ.

## ೧೩ ಚನ್ನವೀರಜಂಗಮದೇವ (೧೭೦೦)

ಕೃತಿ: ಷಟ್ಸ್ಥಲವಲ್ಲಭ. ಚಂಪೂರೂಪದಲ್ಲಿದೆ. ಸದ್ಯದಲ್ಲಿ ೧ ರಿಂದ ೯ ಆಶ್ವಾಸಗಳವರೆಗೆ ಕೃತಿ ಲಭ್ಯವಾಗಿದೆ.

ಮೃದುವಾಕ್ಯದ ವೃಂದದಿಂದ ಕೂಡಿದ ಕಂದಗಳಿಂದಲೂ ಶಿವಲಿಂಗದ ವೃತ್ತಗಳಂತಿರುವ ವೃತ್ತಗಳಿಂದಲೂ ತನ್ನ ಕಾವ್ಯ ಯುಕ್ತವಾಗಿದೆ ಎಂದು ಕವಿ ಹೇಳಿಕೊಂಡಿರುತ್ತಾನೆ. ಶ್ರೀ ಸಿದ್ಧಲಿಂಗಶಿವಯೋಗಿಗಳ ಸಂಬಂಧದ ಕೃತಿಯಾಗಿರುವುದರಿಂದ ಇದನ್ನು ಪರಿಗಣಿಸಬೇಕಾಗಿದೆ. ಈ ಕಾವ್ಯ ಇನ್ನೂ ಪ್ರಕಟವಾಗಿಲ್ಲ.

ನಮ್ಮ ಈ ಗ್ರಂಥದ ಪುಟ ೪೮ರಲ್ಲಿ ಕಾಣಿಸಿರುವ "ದಿವ್ಯಾಗಮಮೂರ್ತಿ" ಎಂಬ ಚನ್ನವೀರಜಂಗಮದೇವರ ಬಿಡಿಪದ್ಯ ಹರಿಹರಮಹಾಕವಿಯ ರಚನಾರೀತಿಯನ್ನು ನೆನಪಿಗೆ ತರುತ್ತಿದೆ.*

---

* ಸುರುಚಿರಮೂರ್ತಿ ಸತ್ಕೃತರಮೂರ್ತಿ ಕೃಪಾಕ್ಕರಮೂರ್ತಿ ಪುಣ್ಯವಿ
ಸ್ತರ ಗುರುಮೂರ್ತಿ ಶಾಂತಿಮಯಮೂರ್ತಿ ಸುಧಾಕರಮೂರ್ತಿಯುತ್ತರೋ – ।
ತ್ತರವರಮೂರ್ತಿ ಮುಕ್ತಿಸುಖಮೂರ್ತಿ ಮನೋಹರಮೂರ್ತಿ ಚಂದ್ರಶೇ
ಖರ ಗುರುಮೂರ್ತಿ ಕೀರ್ತಿಪತಿ ಹಂಪೆಯ ಶಂಕರದೇವರೊಪ್ಪುವರ್ ॥

— ಗಿರಿಜಾಕಲ್ಯಾಣ ೧–೩೫.

## ೧೪ ಹೇರಂಬ (೧೭೨೦)

ಸಂಪ್ರದಾಯದ ಶೈಲಿಯಲ್ಲಿ ಹೊಮ್ಮಿ ಬಂದಿರುವ ಸಾಂಗತ್ಯಗ್ರಂಥವಿದು. ವೈಷ್ಣವ ಬ್ರಾಹ್ಮಣನಾದ ಹೇರಂಬ ಕವಿಯ ಭಕ್ತಿಭಾವ ಅನುಪಮವಾಗಿದೆ. ಪರಧರ್ಮ ಸಹಿಷ್ಣುತೆ ನೆನೆಯತಕ್ಕುದಾಗಿದೆ. ಶ್ರೀ ಸಿದ್ಧಲಿಂಗೇಶ್ವರರ ಪವಾಡಗಳ ನಿರೂಪಣೆಗಾಗಿಯೇ ಈ ಕಾವ್ಯದ ಬಹುಭಾಗ ಮೀಸಲಾಗಿರುವಂತಿದೆ.

## ೧೫ ಶ್ರೀ ಘನಮಠ ಶಿವಯೋಗಿಗಳು (೧೮೮೦)

ಕೈವಲ್ಯಸಾಹಿತ್ಯಪರಂಪರೆಯಲ್ಲಿ ಶ್ರೀ ಘನಮಠ ಶಿವಯೋಗಿಗಳ 'ಭಕ್ತಿಸುಧಾಸಾರ' ಶ್ರೇಷ್ಠಪಂಕ್ತಿಯಲ್ಲಿ ಶೋಭಿಸುತ್ತಿದೆ. ಶಿವಾನುಭವದ ಅಭಿವ್ಯಕ್ತಿಯಾಗಿದೆ. ಈ ತತ್ತ್ವ ಪದಗಳಲ್ಲಿ ಶಿವಯೋಗಿಗಳವರ ದಿವ್ಯಜ್ಞಾನಾನುಭವ ತುಂಬಿ ತುಳುಕಿದೆ. ಬಾಳಿ ಶಿವಮಯವಾದ ತೇಜಸ್ಸನ್ನು ಈ ಗೀತಗಳು ತಂದುಕೊಡುತ್ತಿವೆ. ಬಸವಾದಿ ಪ್ರಮಥರನ್ನು ಕುರಿತ ಇವರ ತತ್ತ್ವಪದಗಳು ಹೃದಯಂಗಮವಾಗಿವೆ. 'ಭಕ್ತಿಸುಧಾಸಾರ' ಸಾರ್ಥಕನಾಮ ವೆಂಬುದು ಇವರ ಭಕ್ತಿಭಾವಗೀತಗಳ ಅನುಶೀಲನದಿಂದ ನಾವು ಮನಗಾಣಬಹುದು.

## ೧೬ ಮಾಗಡಿ ಶ್ರೀ ವೀರಪ್ಪಶಾಸ್ತ್ರಿಗಳು (೧೯೦೦)

ಸಂಸ್ಕೃತ, ಕನ್ನಡಭಾಷೆಯಲ್ಲಿ ಅದ್ವಿತೀಯವಾದ ಪಾಂಡಿತ್ಯವನ್ನು ಇವರು ಪಡೆದಿದ್ದರು. ಜನ್ಮಸ್ಥಳ: ಮಾಗಡಿ. ವೀರಶೈವಧರ್ಮ, ಸಾಹಿತ್ಯ, ಸಿದ್ಧಾಂತಗಳ ಬಗೆಗೆ ಅನವರತ ಶ್ರಮಿಸಿದ ಮಹಾನುಭಾವರು. ೧೯೧೮ರಲ್ಲಿ ಬೆಂಗಳೂರಿನ ಗಂಜಾ ಮಠದ ಪಾಠಶಾಲೆಯಲ್ಲಿ ಇವರು ಶಿಕ್ಷಕರಾಗಿದ್ದರು. ವೀರಶೈವಾನಂದಿನಿ (೧೯೦೬) ವೀರಶೈವ ಧರ್ಮಸಂಗ್ರಹ (೧೯೨೩) – ಎಂಬ ಮಾಸಪತ್ರಿಕೆಗಳನ್ನು ಕೆಲಕಾಲ ಇವರು ನಡೆಸುತ್ತಿದ್ದರೆಂದೂ ಇವರ ಚರಿತ್ರೆಯಿಂದ ತಿಳಿದುಬರುತ್ತದೆ.

'ವೀರಶೈವಾನಂದಿನಿ' ಪತ್ರಿಕೆಯಲ್ಲಿ 'ಸಿದ್ಧೇಶ್ವರ ಮಾಹಾತ್ಮ್ಯ' ಎಂಬ ಹೆಸರಿನಲ್ಲಿ ಎಡೆಯೂರು ಸಿದ್ಧಲಿಂಗೇಶನ ಚರಿತ್ರೆಯನ್ನು ಪ್ರಕಟಿಸಿರುತ್ತಾರೆ. ಇದು ವಿರಕ್ತ ತೋಂಟದಾರ್ಯರ ಸಿದ್ಧೇಶ್ವರ ಪುರಾಣದ ಗದ್ಯರೂಪವೆಂದೆನ್ನಬಹುದು. ಇದಲ್ಲದೆ 'ಶ್ರೀ ಸಿದ್ಧಲಿಂಗೇಶ್ವರ ಶತಕ'ವನ್ನು ಕನ್ನಡದಲ್ಲಿಯೂ 'ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರ' ವನ್ನು ಸಂಸ್ಕೃತದಲ್ಲಿಯೂ ವಿರಚಿಸಿರುವರು. ಅಷ್ಟಾವರಣ ವಿಚಾರದರ್ಪಣ, ಕೋಳೂರು ಕೊಡಗೂಸಿನಕಥೆ, ಜಯದೇವ ಭಜಕಾನಂದಿನಿ, ವೇಮನಾರಾಧ್ಯಕಥೆ – ಮೊದಲಾದ ಕೃತಿಗಳನ್ನೂ ಶ್ರೀ ವೀರಪ್ಪಶಾಸ್ತ್ರಿಗಳು ರಚಿಸಿರುತ್ತಾರೆ.

ಪ್ರಕೃತ ಗ್ರಂಥದಲ್ಲಿ ಸಂಸ್ಕೃತದಲ್ಲಿರುವ 'ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರ'ವನ್ನು ಸಮಗ್ರವಾಗಿಯೂ 'ಶ್ರೀ ಸಿದ್ಧಲಿಂಗೇಶ್ವರ ಶತಕ'ದಿಂದ ಆಯ್ದ ಕೆಲವು ಪದ್ಯಗಳನ್ನು ಕೊಡಲಾಗಿದೆ.

ನಿನ್ನ ದರ್ಶನಭಾಗ್ಯ ಜೀವನದ ಸೌಭಾಗ್ಯ
ನಿನ್ನ ನಾಮಸ್ಮರಣ ಭವತಾಪ–ಭಯಹರಣ
ನಿನ್ನ ಚರಣಸ್ಪರ್ಶ ಪರುಷವೆಂಬುದ ಕೇಳಿ
ಪ್ರಮಥಗಣ ನೆರೆದಿಹುದು ಏಳಯ್ಯ ಸಿದ್ಧೇಶ

ಪಿಂತೆ ನೀಂ ಕೃತ ತ್ರೇತ ದ್ವಾಪರ ಯುಗಂಗಳಲಿ
ಸಂತಸದಿ ಸದ್ಭಕ್ತರುದ್ಧಾರಗೈದಂತೆ
ಕ್ರಾಂತಿ ಕಹಳೆಯನೂದಿ ಕಲಿಯುಗವ ಪೊರೆವವನೆ
ನಿತ್ಯದಂತೇಳಯ್ಯ ಶ್ರೀ ನಿರಂಜನಲಿಂಗ

ಗೋಸಲಮಹಾಸ್ವಾಮಿ ಶ್ರೀಚನ್ನಬಸವೇಶ–
ದೇಶಿಕಗೆ ತ್ರೈಕರಣಶುದ್ಧಿಯಿಂ ಗುರುಸೇವೆ
ಲೇಸಾಗಿ ಶಿಷ್ಯರಿಗೆ ತೋರಿದಂತೆಮ್ಮಿಂದ
ಪೂಜೆಗೊಳ್ಳಲು ಬೇಗ ನೀನೇಳು ಸಿದ್ಧೇಶ

ಬಸವೇಶ ಚೆನ್ನಬಸವೇಶ್ವರ ಪ್ರಭುಗಳಿಂ
ಜಸವೆತ್ತ ಶಿವಧರ್ಮದೀಪ್ತಿಯನು ಪ್ರಜ್ವಲಿಸಿ
ವಸುಧೆಯೊಳು ಬೆಳಗಿಸಿದ ಶಿವಯೋಗಸುಜ್ಞಾನಿ
ಬೆಳಗಾಯಿತೇಳಯ್ಯ ಗುರುತೋಂಟದಾರ್ಯ

ಬಾಧೆಗೊಳಿಪಾಧಾರವಾಜ್ಞಾದಿ ಗತಿಬಿಡಿಸಿ
ಬಾಧೆಯಿಲ್ಲದ ಕಣ್ಣೆನೆವೆಯಾಟ ನಿಲ್ಲಿಸುವ
ಸಾಧಿಸುವ ಶಿವಯೋಗ ಕರುಣಿಸಲು
ಏಳು ತೋಂಟದ ಒಡೆಯ ಸಿದ್ಧಲಿಂಗೇಶ

ಎನಿತೊ ಪುಣ್ಯವ ಕೊಟ್ಟು ಮನುಜದೇಹವ ತೊಟ್ಟು
ಮನುಜತೆಯ ಸಲೆಯರಿದು ಶರಣಮಾರ್ಗದಿ ನಡೆದು
ಘನಮಹಿಮ ಷಟ್ಸ್ಥಲಜ್ಞಾನಸಾರಾಮೃತವ–
ನುಣುವ ಬಗೆ ತಿಳಿಸೇಳು ಗುರುತೋಂಟದಾರ್ಯ

ನಾಮ ರೂಪಗಳಿಲ್ಲದವ್ಯಕ್ತದಿಂ, ವ್ಯಕ್ತ–
ನಾಮ ರೂಪಗಳಾಗಿ ಶಕ್ತಿ ಸಂಕುಚಿತಾಗಿ
ಆ ಮೂಲವದನಗಲಿ ಭೂವ್ಯೋಮದಲಿ ಚದುರಿ–
ದರ್ಥವನು ತಿಳಿಸೇಳು ಗುರುಸಿದ್ಧದೇಶಿಕನೆ

ಸತ್ತು ಚಿತ್ತಾನಂದ ನಿತ್ಯಪರಿಪೂರ್ಣವಹ–
ವಸ್ತು, ನೀನೆನಿತೊ ರಸರಾಗರಂಜನೆಯ ನಿಜ–
ಸತ್ವಗಳನೊಳಗೊಂಡು ಬೀಜಾಂಡದಂತಿರದೆ
ವಿಸ್ತಾರವೇಕಾದೆ ತಿಳಿಸೇಳು ಘನಮಹಿಮ

ಗುರುಸಿದ್ಧಲಿಂಗೇಶ ಸ್ವವಿಮರ್ಶಶಕ್ತಿಯಿಂ
ಮೆರೆಯುವೈ ಲಿಂಗಾಂಗ ಸದ್ರೂಪು ನೀನಾಗಿ
ಧರೆಯರಿಯೆ ಲೀಲಾವಿನೋದದಿಂದೆರಡಾದ
ಪರತತ್ವ ಬಿತ್ತರಿಸಲೇಳಯ್ಯ ಸಿದ್ಧೇಶ

ಲಿಂಗವಿದು ನಿಶ್ಶೂನ್ಯ ಚಿತ್ಕ್ರಣವ ಚಿಚ್ಛಕ್ತಿ
ಜಂಗಮನ ಚಿದ್ರೂಪು ಷಡ್ಲಿಂಗದಾಲಯವು
ಲಿಂಗವು ಮನೋಭಾವ ದೃಷ್ಟಿಗಳ ವೈಭವದ
ಮರ್ಮವನು ತಿಳಿಸೇಳು ಸಿದ್ಧೇಶ ಭವನಾಶ

ಲಿಂಗ ಚಿತ್ಸುಖಸಾರ ವೀರಶೈವಾಚಾರ
ಲಿಂಗವಿದು ಸುಸ್ಥಿರ ಪರಂಜ್ಯೋತಿಯಾಕಾರ
ಲಿಂಗವಿದು ವಿಶ್ವಚೇತನದ ಮೂಲಾಧಾರ–
ವೆಂದಿದನು ತಿಳಿಸೇಳು ಸಿದ್ಧೇಂದ್ರ ಯತಿಚಂದ್ರ

ಮೂರು ದೇಹಕೆ ಮೂರು ಲಿಂಗಗಳಿಗೀ ಲಿಂಗ
ಆರು ಇಂದ್ರಿಯಕಾರು ಲಿಂಗಗಳಿಗೀ ಲಿಂಗ
ಆರು ಮೂರೊಂಬತ್ತು ಪ್ರಣವಗಳಿಗೀ ಲಿಂಗ–
ವೀ ರತಿಯನೆನಗೀಯಲೇಳಯ್ಯ ಚಿತ್ಸೂರ್ಯ

ಅಂಗವಿದು ಅಣುಭೂತ ಪಂಚಕದ ಸಂಕುಳವು
ಅಂಗ ಮೂದೀಕ್ಷೆಯಿಂ ಶುದ್ಧಾದ ಕ್ರಿಯತನುವು
ಅಂಗ ಮೂಮಲವಳಿದು ಲಿಂಗನೆಲೆಗಾಶ್ರಯವು
ಮಂಗಲನೆ ಈ ಅಂಗ ಸೇವೆಯನು ಕೊಳ್ಳೇಳು

ಅಂಗವಷ್ಟಾವರಣಕಂಗವಾಗಿರುವಂಗ
ಅಂಗ ಪಂಚಾಚಾರ ಪ್ರಾಣಕಾಗಿರುವಂಗ
ಅಂಗವಿದು ಷಟ್ಸ್ಥಲಕೆ ಆತ್ಮವಾಗಿರುವಂಗ
ಈ ಮೂರನೊಳಗೊಂಡ ತ್ರ್ಯಂಬಕೇಶ್ವರನೇಳು

ಇಂತಿರುವವಂಗವಾಲಿಂಗದೊಳಗೊಂದಾಗಿ
ಅಂತರಾತ್ಮನ ಬಿಂಬ ಪ್ರತಿಬಿಂಬದಂತಾಗಿ
ಚಿಂತೆ ಭ್ರಾಂತಿಯ ನೀಗಿ ಸಂತಸದಿ ಶಾಶ್ವತದ
ಸುಖ ಕರುಣಿಸೇಳಯ್ಯ ಸುಖರಸಾಮೃತಸಿಂಧು

ಶ್ರೀ ಬೋಳಬಸವಾರ್ಯ ಮುಂತಾದ ವಿರತರಿಗೆ
ನೀ ಬೋಧೆಯಂ ಕೊಟ್ಟು ಸುಪ್ರಸಾದವನಿತ್ತು
ಆಬಾಲವೃದ್ಧರನು ಕರುಣಿಸಿದ ಪರಿಯೊಳಗೆ
ಒಂದಂಶವೆನಗೀಯಲೇಳು ಕರುಣಾಸಿಂಧು

ತನುವೆಂಬ ಹುತ್ತಿನೊಳಗಾತ್ಮನೀ ಸಿದ್ಧೇಶ
ತನುಶಿಖರದಜರಂಧ್ರ ಕಪಿಲೆ ಗುರುಸಿದ್ಧೇಶ
ಪ್ರಣತೆ ಕಂಗಳಕಾಂತಿ ಕಾಲ ಕಾಮರ ಜಯವೆ
ಶಿವಪೂಜೆ, ಸುಸಮಾಧಿ ತಿಳಿದೇಳು ಸಿದ್ಧೇಶ

ನಿನ್ನ ಬೆಡಗಿನನುಡಿಯನರಿವ ಮತಿಯೆನಗಿಲ್ಲ
ಕಣ್ಣಸನ್ನೆಯನ್ನರಿವ ಕಿಂಕರತೆ ಮೊದಲಿಲ್ಲ
ಉನ್ನತ ತಪೋಮಾರ್ಗ ಗಮನ ಮನವೊಳಗಿಲ್ಲ
ನಿನ್ನ ಭಜಕರ ನೀನೆ ಪೊರೆಯೇಳು ಸಿದ್ಧೇಶ

ಸೊಡರಿಂಗೆ ನೀರೆರೆದೆ ಸಿಡಿಲಪೂಜೆಯ ಕೊಂಡೆ
ಮಡಿದವರ ಬದುಕಿಸಿದೆ ಪೈಶಾಚತನವಳಿದೆ
ಅಡಿ ಸೋಂಕೆ ಜಲ ಬುಗ್ಗೆ, ಅಡಿಯಿಡಲು ನದಿ ಕುಗ್ಗೆ
ನಡುಗುತಿಹುದೆನ್ನೆದೆಯು ತಡವಲೇಳೈ ತಂದೆ

ಪರವಾದಿಗಳ ನಿಗ್ರಹಿಸಿ ಶಿವವನುಗ್ರಹಿಸಿ
ಚರಚರಣ ಸ್ಥಾವರಕ್ಕಧಿಕವೆಂಬುದ ತೋರಿ
ವರಶಿವಾದ್ವೈತದ ಮಹಾಜ್ಞಾನ ಬೋಧಿಸಿದ
ಗುರು ತೋಂಟಸಿದ್ದೇಶ ಬೆಳಗಾಯಿತೇಳಯ್ಯ

ಶ್ರೀಮನ್ನಿರಂಜನ ಜಗದ್ಗುರು ಪರಂಪರೆಯ
ಶ್ರೀಮುರುಘರಾಜೇಂದ್ರ ಜಯವಿಭವ ಕರಜನಿತ
ಸ್ವಾಮಿಕಿಂಕರ ಬಸವರಾಜನೀ ಸಿದ್ದೇಶ
ಸುಪ್ರಭಾತವ ರಚಿಸಿ ಅರ್ಪಿಸುವನೇಳಯ್ಯ

ಚರವರ್ಯಸಿದ್ದೇಶ ಸುಪ್ರಭಾತವನಿದನು
ಸ್ಥಿರಮನದಿ ಮಡಿಯಿಂದ ಪಾರಾಯಣಂಗೈಯೆ
ಗುರುಕೃಪಾ ಸ್ಥಿರಭಕ್ತಿ ಲಿಂಗಭೋಗದ ಭಾಗ್ಯ
ಸಿದ್ಧಿಪುದು ದಿಟವೆಂದು ಕರುಣಿಸೇಳೈ ಪ್ರಭುವೆ

ಮಂಗಲವು ಪ್ರತ್ಯಕ್ಷ ಪ್ರಣವಸ್ವರೂಪನಿಗೆ
ಮಂಗಲವು ಷಟ್ಸ್ಥಲಾಚಾರಪ್ರದೀಪನಿಗೆ
ಮಂಗಲವು ಶಿವಯೋಗಸುಖಸತ್ಕಲಾಪನಿಗೆ
ಮಂಗಲನೆ ಮಂಗಲವ ಬೆಳಗೇಳು ಕವಿವರನೆ.



# ಸಿದ್ಧೇಶ ಚಿತ್ಕೋಶ

— ಶಾಂತೇಶಕವಿ.

ವ॥ ಹರುಷದಿಂ ಶಿವನಾಜ್ಞೆಯಿಂ ತಳೆ
ದುರು ರಜತಗಿರಿಯಿಂದ ಮರ್ತ್ಯಕೆ
ಪರಮ ತೋಂಟದ ಸಿದ್ಧಲಿಂಗಂ ಬಂದನತಿಶಯದಿಂ ॥

ಶ್ರೀ ವಿಮಲ ಕಾತ್ಯಾಯನೀಶ್ವರ
ದೇವಿಯಾನನ ಪದ್ಮ ಮಧುಕರ
ಪಾವನಾತ್ಮ ಗಿರೀಶ ಶಂಕರ ಕರುಣ ಘನವಾಸಾ ।
ದೇವ ದೇವ ನವೀನ ನಿರ್ಮಲ
ಜೀವಿತೇಶ್ವರ ಕೈರವಾರುಣ
ಭೂವಳಯಮಂ ಪಾಲಿಪುದು ಸಿದ್ದೇಶ ಚಿತ್ಕೋಶಾ ॥

ಶರಣವದನಾಂಬುಜ ದಿವಾಕರ
ಪರಮ ಪಾವನ ಸತ್ಯಪಾಕರ
ಪರಿಮುಖಾಂಬುಜ ಚಾರುದಿನಕರ ರಿಪುಭಯಂಕರನೇ ।
ಸುರುಚಿರಾಮಲ ಮೂರ್ತಿ ಶಂಕರ
ಗುರುಕುಲಾಂಬುಧಿ ಪೂರ್ಣಹಿಮಕರ
ಧರೆಯ ಸುಜನರ ಪಾಲಿಪುದು ಸಿದ್ದೇಶ ಶುಭಕರನೆ ॥

ಕರುಣನಿಧಿ ಕಮನೀಯ ಮಂಗಲ
ಶರಣರಾನನ ಪದ್ಮಸೂರ್ಯನೆ
ಪರಮ ಪರ ಪರಮೇಶ ಪರತರ ಪಾವನದ ರೂಪಾ ।
ಸುರುಚಿರಾಮಲಮೂರ್ತಿ ಗುರುವರ
ತರುಣ ಶಶಿಧರ ಶರ್ವ ಶಂಕರ
ಸ್ಥಿರಯಶೋವಿಸ್ತಾರ ತೋಂಟದಲಿಂಗ ಜಯ ಜಯತು ॥

ಸಿದ್ಧೇಶ್ವರ ಪುರಾಣ. ಸಂಧಿ ೧. ಪದ್ಯಗಳು ೧, ೮, ೯.

# ಸ್ತೋತ್ರ ದ ಶ ಕ

— ವಿರಕ್ತ ತೋಂಟದಾರ್ಯ.

ಸೂಚನೆ ॥ ಪರಮ ಶ್ರೀ ಗುರು ನಿರಂಜನ ಲಿಂಗನಿಳೆಯೊಳವ
ತರಿಸಿ ತೋಂಟದ ಸಿದ್ಧಲಿಂಗೇಶನೆಂಬ ಪರ
ತರ ನಾಮವಾಂತಖಿಳಮಹಿಮೆಯುಂ ಪಡೆದು ಶಿವಶರಣರಂ ಸಲಹುತಿರ್ದಂ ॥

ತ್ರಾಹಿ ಮೃತ್ಯುಂಜಯ ನಿರಾಮಯ ನಿರಾಧಾರ ।
ತ್ರಾಹಿ ನಿರುಪಮ ನಿರಾಲಂಬ ಚಿದ್ರಸಪೂರ ।
ತ್ರಾಹಿ ಆನತಜನನಿಕರ ಸುಖಕರಣ ಕೃಪಾಭರಣ ಭವತಿಮಿರಾರುಣ ॥
ತ್ರಾಹಿ ಷಡ್ವಿಧಲಿಂಗಸಂಗ ಸದ್ಗುಣತುಂಗ ।
ತ್ರಾಹಿ ಮಾಯಾಭಂಗ ನಿತ್ಯ ಕರುಣಾಪಾಂಗ ।
ತ್ರಾಹಿ ಗುರುಸಿದ್ಧಯತಿರಾಯ ಚಿತ್ಕಾಯ ರಾಜಾರ್ಧಶೇಖರ ಪುರಹರಾ ॥ ೧ ॥

ಜಯ ಜನಾರ್ದನ ಘನಪ್ರೀತ ಶರಣವ್ರಾತ ।
ಜಯ ಜಿತಕುಸುಮಚಾಪ ಜನನಮರಣವಿಲೋಪ ।
ಜಯ ಜಾತಿಸೂತಕವಿಕಾರಹರ ನಮಿತ ಜನತಾನಂದಕರ ಶುಭಕರಾ ॥
ಜಯ ಜಂಗಮಾಕಾರ ಸಕಲಜಗದಾಧಾರ ।
ಜಯ ಜಟಾಮುಕುಟಾಂಕ ನಿರ್ಮಲ ನಿರಾತಂಕ ।
ಜಯ ಪರಂಜ್ಯೋತಿಃಪ್ರಕಾಶ ಗುರು ಸಿದ್ಧಲಿಂಗೇಶ ಸುಜ್ಞಾನಕೋಶಾ ॥ ೨ ॥

ಜಯತು ನತಜನದುರಿತಹರಣ ನಿರ್ಮಲಕರಣ ।
ಜಯತು ಯಮಿಜನ ಹೃದಯವಾಸ ಸೌಖ್ಯಾವೇಶ ।
ಜಯತು ನಿಗಮಾಗಮಾತೀತ ಸುಗುಣವ್ರಾತ ಜಯತು ಲೋಕೈಕನಾಥ । .ಗ
ಜಯತು ಸಂಸೃತಿಘನಪವನ ಸನ್ನುತಚ್ಯವನ । .ಅಗ
ಜಯತು ನಿರ್ಮಲಗಾತ್ರ ಶುದ್ಧಕರ ಚಾರಿತ್ರ । .೨ ಧ್ವಿಃಅಗ
ಜಯತು ಜಂಗಮಲಿಂಗ ಚಿದ್ಯೋತಿಷಿದಾಲಿಂಗನಾಂಗ ಜಯ ಸಿದ್ಧಲಿಂಗಾಗಂತಿ ಧ್ವಿಃತಿಃಗ॥

ಪಾಹಿ ಶಿವಯೋಗಿ ಜನಯೂಥ ಗಿರಿಜಾನಾಥ ।
ಪಾಹಿ ಸುಜ್ಞಾನಾವಲಂಬಿ ಭಕ್ತಕುಟುಂಬಿ ।
ಪಾಹಿ ಜಿತಕುಸುಮ ಕೋದಂಡ ನಿರ್ಮಲ ನಿಜಾಖಂಡ ಗುಣಮಣಿಕರಂಡಾ ॥
ಪಾಹಿ ಹರಿನಯನಪೂಜಿತ ಚರಣ ಸುಖಕರಣ ।
ಪಾಹಿ ಶುದ್ಧಸ್ಫಟಿಕಗಾತ್ರ ಪಾವಕನೇತ್ರ ।
ಪಾಹಿ ಗುರುಸಿದ್ಧಲಿಂಗೇಂದ್ರ ಸದ್ಗುಣರುಂದ್ರ ನತಜನಕುವಲಯ ಚಂದ್ರಾ ॥ ೪ ॥

ದೇವಸದ್ಭಕ್ತಜನಜೀವ ನಿರ್ಮಲಭಾವ ।
ದೇವ ಮಾಯಾಸಂಹರಣ ನಿಜನಿರಾವರಣ ।
ದೇವ ನಿರವದ್ಯ ಜಗದಾರಾಧ್ಯ ಶ್ರುತಿತತಿಗಭೇದ್ಯ ಸುಜ್ಞಾನವೇದ್ಯ ॥
ದೇವ ಕಾಮಾರಿ ಸುಕೃತಾಕಾರಿ ಸುಖಕಾರಿ ।
ದೇವ ಶಿವಯೋಗಿಗಳರಸ ಚಿತ್ಕಲಾ ಸರಸ ।
ದೇವ ಗುರುಸಿದ್ಧಯತಿರಾಯ ಚಿತ್ಕಾಯ ಜಯತೆಂದು ನುತಿಸುತ್ತಿರ್ದೆನು ॥ ೫ ॥

ಜಯ ಯತಿಸ್ತುತಿಪಾತ್ರ ಜನ್ಮಪಾಶ ಲವಿತ್ರ ।
ಜಯ ಸದ್ಗುಣಸ್ತೋಮ ಶಾಕ್ವರಪತಿಲಲಾಮ ।
ಜಯ ಜಗದ್ಧಿತರೂಪ ಚಿದ್ಘನಿತೆಯೋಪ ಹತಪಾಪ ಸತ್ಯಪ್ರತಾಪ ॥
ಜಯ ಮುಕ್ತಸಂಸರಣ ನಿರ್ಮಲಾಂತಃಕರಣ ।
ಜಯ ಪರಮಪುಣ್ಯ ದೂರೀಕೃತತ್ರೈಗುಣ್ಯ ।
ಜಯ ಸಿದ್ಧಲಿಂಗೇಶ ವಿಜಿತಕೀನಾಶ ಸರ್ವೇಶ ನಿರ್ವೇಶವಾಸ ॥ ೬ ॥

ಗುರುಸಿದ್ಧಲಿಂಗ ಕರುಣಾಪಾಂಗ ಭವಭಂಗ ।
ಗುರುಸಿದ್ಧಲಿಂಗೇಂದ್ರ ನತಜನಾಂಬುಧಿಚಂದ್ರ ।
ಗುರು ಸಿದ್ಧಲಿಂಗಾರ್ಯ ವೀರಪ್ರತಾಚಾರಚರ್ಯ ಸೌಂದರ್ಯವೀರ್ಯ ॥
ಗುರು ಸಿದ್ಧಯತಿರಾಯ ಜಿತಮಾಯ ಚಿತ್ಕಾಯ ।
ಗುರುಸಿದ್ಧಲಿಂಗಯ್ಯ ಯೋಗಿಜನ ಹೃಚ್ಛಯ್ಯ ।
ಗುರುಸಿದ್ಧಲಿಂಗೇಶ ಸುಜ್ಞಾನಸಂಕಾಶ ಜಯ ಜಯಾಕಾಶಕೇಶಾ ॥ ೭ ॥

ಗುರುವೆ ಜಯ ಜಯ ಸರ್ವಲೋಕೇಶ ಶರಣಸುರ–
ತರುವೆ ಜಯ ಜಯ ನತಜನೌಘವೃಜಿನಾಚಲ–
ಸ್ವರುವೆ ಜಯ ಜಯ ಪರಾತ್ಪರವೆ ಜಯ ಜಯ ನಿತ್ಯದಿರವೆ ಜಯ ಜಯ ಮುಕ್ತಿಯ
ಕರುವೆ ಜಯ ಜಯ ವಿಮಳ ಸಚ್ಚಿದಾನಂದ ಸಾ–
ಗರವೆ ಜಯ ಜಯ ದುಷ್ಟತರ ಕಾಲಕರ್ಮ ಸಂ–
ಹರವೆ ಜಯ ಜಯ ನಿಖಿಳಭವಭಯಂಕರವೆ ಜಯ ಜಯ ಸಿದ್ಧಲಿಂಗ ಗುರುವೆ ॥ ೮ ॥

ತ್ರಾಹಿ ತಾರಾಚಲಾಗಾರ ಭುವನಾಧಾರ ।
ತ್ರಾಹಿಯಗಣಿತ ಗುಣಕಲಾಪ ಸಂವಿದ್ರೂಪ ।
ತ್ರಾಹಿಯಾನತಜನವ್ರಾತ ದುರಿತೌಘಜೀಮೂತಝುಂಝಾಮಾರುತಾ ॥
ತ್ರಾಹಿ ಮಾಯಾಮದ ವಿಭಂಗ ಸದ್ಗುರುಲಿಂಗ
ತ್ರಾಹಿ ಕಾರುಣ್ಯವಾರಾಶಿ ಜಿತಭವದೋಷಿ
ತ್ರಾಹಿ ತೋಂಟದ ಸಿದ್ಧಲಿಂಗದೇಶಿಕ ವಶೀಕೃತ ಭೂತವಿಮಲದೇಹ ॥ ೯ ॥

ದೇವ ಮಾಯಾತಿಮಿರಹರಣರವಿ ಸುಖಕರಣ ।
ದೇವ ಪಾವನ ಕಳೇವರ ವಿಶುದ್ಧ ಕೈವಲ್ಯವನಿ– ।
ತಾವರ ಸಮಸ್ತಲೋಕಾಧಾರಮೂರ್ತಿ ಶ್ರುತಿತತಿ ಶಿರೋವರ್ತಿ ನಿಖಿಳ ॥
ದೇವತಾಸ್ತುತ್ಯ ನಿಶ್ಚಲ ನಿರರ್ಗಲ ನಿತ್ಯ ।
ಕೇವಲ ಚಿದಾನಂದರೂಪ ನಿರ್ಜಿತಪಾಪ
ಭಾವಜಾಂತಕ ತೋಂಟದಾರ್ಯ ಜಯ ಜಯತಸಮವೀರ್ಯ ಶಿವಶರಣವರ್ಯಾ ॥ ೧೦ ॥

---

ಶ್ರೀ ಸಿದ್ಧೇಶ್ವರ ಮಹಾಪುರಾಣ. ಆಯ್ದ ಪದ್ಯಗಳ ಪರಿವಿಡಿ: ಮೊದಲು ಸ್ತೋತ್ರದಶಕದ ಕ್ರಮಸಂಖ್ಯೆಯನ್ನೂ ಬಳಿಕ ಪುರಾಣಕೃತಿಯ ಸಂಧಿ ಹಾಗೂ ಪದ್ಯಸಂಖ್ಯೆಯನ್ನು ಇಲ್ಲಿ ಕಾಣಿಸಿದೆ:—

| | | |
|---|---|---|
| ೧–೨ | ೪ | ೪೨, ೪೩ |
| ೩ | ೫ | ೪೦ |
| ೪ | ೬ | ೯೭ |
| ೫ | ೭ | ೮೪ |
| ೬, ೭, ೮ | ೯ | ೫೩, ೫೪, ೫೫ |
| ೯ | ೧೧ | ೪೦ |
| ೧೦ | ೨೪ | ೪೩ |

# ದಿವ್ಯಾಗಮಮೂರ್ತಿ

— ಚನ್ನವೀರ ಜಂಗಮದೇವ.

ಶ್ರೀ ಗುರುಮೂರ್ತಿ ಮಂತ್ರಮಯ ಮದ್ಗುರುಮೂರ್ತಿ ಪವಿತ್ರಮೂರ್ತಿ ದಿ।
ವ್ಯಾಗಮಮೂರ್ತಿ ಸತ್ಯಮಯ ಸದ್ಗುರುಮೂರ್ತಿ ವಿವೇಕಮೂರ್ತಿ ಭ।
ಕ್ತ್ಯಾಂಗವಿಚಾರಮೂರ್ತಿ ಕರುಣಾಕರಮೂರ್ತಿ ವಿಲಾಸಮೂರ್ತಿ ಲಿಂ।
ಗಾಂಗ ಸುಸಿದ್ಧಲಿಂಗ ಘನಮೂರ್ತಿಯದೀಗೆ ಮಹೋತ್ಸವಗಂಳಂ ॥

ಷಟ್ಸ್ಥಲ ವಲ್ಲಭ : ೧-೪:

# ಚೇತಸ್ಸದಾಧಾಮ

— ವಿರಕ್ತ ತೋಂಟದಾರ್ಯರ್.

ಶ್ರೀಮಚ್ಛಾಶ್ವತ ಶುದ್ಧದಿವ್ಯ ಘನಸತ್ಯಪ್ರತ್ಯಯಾನಂದ ಸಂ ।
ಸ್ತೋಮ ಕ್ಷೇಮಮಯ ಪ್ರಭೂಮ ನಿಜಶಕ್ತಿ ಕ್ಷೋಭಕೋದ್ದಾಮ ನಿ ॥
ಸ್ಸೀಮೋತ್ಕೃಷ್ಟ ವಿಶಿಷ್ಟ ಷಟ್ಸ್ಥಲಚರಿಷ್ಣುವ್ರಾತ ಚೇತಸ್ಸದಾ ।
ಧಾಮ ಪ್ರೇಮದಿನೆನ್ನನಿಂತು ಸಲಹಾ ಶ್ರೀ ಸಿದ್ಧಲಿಂಗೇಶ್ವರಾ ॥

ನೀನೇ ಬಂದು ನಿರಂಜನಾಹ್ವಯದೆ ಮತ್ತಂ ಲೋಕಮಂ ರಕ್ಷಿಸಲ್ ।
ಜ್ಞಾನಾನಂದ ಗಣೇಶನಾಮದೆ ಬಳಿಕ್ಕಂ ನಿರ್ಮಲಾಖ್ಯಾದಿಯಂ ॥
ಜ್ಞಾನಾಕೀರ್ಣವಿಚಿತ್ರಮಾದ ಚರಲಿಂಗಾಕಾರಮಂ ತಾಳ್ದುದ
ಕ್ಕೇನೆಂದಾಂ ನುತಿಪೇಂ ತವಾಧಿಕ್ಯಮಿದಂ ಶ್ರೀ ಸಿದ್ಧಲಿಂಗೇಶ್ವರಾ ॥

ಪರಮಜ್ಞಾನವಿಶಿಷ್ಟತೇಜವಮಿತಾಖಂಡಾತ್ಮಕಂ ಮತ್ತಮಾ ।
ಪರಶಕ್ತ್ಯಾಸಯುತಂ ಷಡಧ್ವಮಯ ವಿಶ್ವಾಧಾರ ಭೂತಂ ಪರಾ ।
ತ್ಪರಮಾತ್ಮಸ್ಥಮನಾಮಯಂ ಸಕಲ ಭಾಂತಂ ಸರ್ವಗಂ ಪಂಚಮೋ ।
ತ್ಕರಸಂಜ್ಞಾಂಕಿತಮಾದಲಿಂಗವದು ನೀಂ ಶ್ರೀ ಸಿದ್ಧಲಿಂಗೇಶ್ವರಾ ॥

ತನುವಾತ್ಮಂ ಹರಣಂ ಹೃಷೀಕಚಯಮರ್ಥಂ ತೃಪ್ತಿಯೆಂಬಿಂತಿವುಂ ।
ಮಿನುಪಾಚಾರ ಗುರುಂ ಶಿವಂ ವಿಲಸದುದ್ಯಜ್ಜಂಗಮಂ ಮತ್ತಮಾ ॥
ಘನಶೇಷಾತ್ಮಕಲಿಂಗಮುತ್ತಮ ಮಹಾಲಿಂಗಂ ಕನತ್ಷಟ್ಸ್ಥಲಂ ।
ವಿನುತಾಕಾರಮದಾದ ತಚ್ಛಿವನೆ ನೀಂ ಶ್ರೀ ಸಿದ್ಧಲಿಂಗೇಶ್ವರಾ ॥

ವಿಲಸತ್ಸೂಕ್ಷ್ಮಮೆನಿಪ್ಪ ಚಿತ್ಕಳೆಯನಿಂತುಂ ಭಾವದೊಳ್ತಂದು ಮ ।
ತ್ತೊಲವಿಂ ಮಾನಸದಲ್ಲಿಗೆಯ್ದಿಸಿ ಬಳಿಕ್ಕಂ ದೃಷ್ಟಿಯೊಳ್ತಂದದಂ ॥
ನೆಲೆಗೊಳ್ಪಂದದೆ ಹಸ್ತದೊಳಿರಿಸಿ ಅಂತರ್ಬಾಹ್ಯವೆಂಬೀ ದ್ವಿಧಾ ।
ಸ್ಥಲದೊಳ್ಕಂಗೊಳಿಪಂತೆ ಸಂಗಳಿಸುವೈ ಶ್ರೀ ಸಿದ್ಧಲಿಂಗೇಶ್ವರಾ ॥

ಶಿವಚಿನ್ಹಾಂಕಿತನಾಗಿ ಬಾಹ್ಯದ ಬಹು ವ್ಯಾಪಾರಮಂ ತೀರ್ಚಿಯು ।
ತ್ಸವದಿಂದಂ ಸರ್ವಪದಂಗಳಂ ಜಯಿಸಿ ಸುಜ್ಞಾನಾಮೃತಾಸ್ವಾದದಿಂ ॥
ತವೆ ಸಂತೃಪ್ತಿಯನೆಯ್ದಿ ನಿರ್ಜನವನ ಪ್ರಾಂತಂಗಳೊಳ್ ಜಾನಿಸು ।
ತ್ತವೆ ನಿಮ್ಮಂ ಸುಖಿಮಿರ್ಪುದುಂ ಕರುಣಿಸಾ ಶ್ರೀ ಸಿದ್ಧಲಿಂಗೇಶ್ವರಾ ॥

---

ಶ್ರೀ ಸಿದ್ಧಲಿಂಗೇಶ್ವರ ಶತಕಂ : ಪದ್ಯಗಳು ೧, ೩೧, ೩೮, ೪೫, ೪೮, ೫೪.

# ಮಂಗಳ ಮಹಿಮೆಯ ಸಿರಿಗೆ!

**— ಹೇರಂಬಕವಿ-**

ಮಂಗಳ ಯೋಗಾಂಗನಾಕ್ರೀಡ ಶ್ರೀ ಸಿದ್ಧ ।
ಲಿಂಗಗೆ ಭಕ್ತಸಂಗನಿಗೆ ॥
ಮಂಗಳ ಕಲಿ ಮಾಯಾಂಗನ ಗರ್ವಭಂಗ ನಿ – ।
ಜಾಂಗ ಭುಜಂಗ ಶರಣನಿಗೆ ॥

ಮಂಗಳ ಕಗ್ಗೆರೆಯೊಳು ಯೋಗಗಯ್ವಗೆ ।
ಮಂಗಳಯತಿ ಸಿದ್ಧೇಶ್ವರಗೆ ॥
ಮಂಗಳ ಮೊರೆಪೊಕ್ಕರನು ಕಾಯ್ವ ದೇವಗೆ ।
ಮಂಗಳ ಮಹಾಗುಣಾರ್ಣವಗೆ ॥

*

ಮಂಗಳ ಜಯ ಜಯ ಶ್ರೀ ಸಿದ್ಧಲಿಂಗಗೆ ।
ಮಂಗಳ ಮಹಿಮೆಯ ಸಿರಿಗೆ ॥
ಮಂಗಳ ಮೃತ್ಯುಂಜಯನಿಗೆ ಭಕ್ತ ಶು – ।
ಭಾಂಗಗೆ ಸಿದ್ಧಲಿಂಗನಿಗೆ ॥

ಜಯ ಜಯ ಜನಿಮೃತಿದೂರ ಶುಭಾಂಗಗೆ ।
ಜಯ ಜಯ ಜಗದ ಪಾವನಗೆ ॥
ಜಯ ಪರಂಜ್ಯೋತಿ ಸ್ಥಿರಂಜೀವಿ ಮೂರ್ತಿಗೆ ।
ಜಯ ಜಯ ಸಿದ್ಧಲಿಂಗನಿಗೆ ॥

ಶ್ರೀ ಸಿದ್ಧಲಿಂಗೇಶ್ವರ ಸಾಂಗತ್ಯ: ಸಂಧಿ ೨೪. ಪದ್ಯ ೬೯, ೭೦. ಸಂಧಿ ೨೫. ಪದ್ಯ ೧೦೨, ೧೦೩.

# ಸಿದ್ಧೇಶ್ವರ ತ್ರಿವಿಧಿ

ಜಯ ಜಯತು ಜಗದೀಶ ಜಯತು ಅಘಹರನೆ
ಜಯ ಜಯತು ನಿಗಮ ಸಂತತಿಗೆ ದುರ್ಲಭನೆ
ಜಯತು ಸಿದ್ಧೇಶ ದಯವಾಗು ॥ ೧ ॥

ಆದಿ ನಿರಂಜನನೆ ಮೇದಿನಿಯೊಳು ಬಂದು
ಬೋಧಿಸುತೆ ಶರಣ ಸಂತತಿಗೆ ಗುರುವಾದ
ನಾದಮಯ ಸಿದ್ಧ ದಯವಾಗು ॥ ೨ ॥

ಬಸವನಾ ಭಕುತಿಯುಂ ಶಶಿಧರನ ಜ್ಞಾನಮುಂ
ಅಸಮ ಗಣಕುಲದ – ವೈರಾಗ್ಯ ಇವು ಮೂರು
ವಶವಾದ ಸಿದ್ಧ ದಯವಾಗು ॥ ೩ ॥

ಸತ್ತುಚಿತ್ತಾನಂದ ನಿತ್ಯಪರಿಪೂರ್ಣನೆ
ಭಕ್ತವತ್ಸಲನೆ–ಭವರೋಗವೈದ್ಯನೇ
ಕರ್ತೃ ಸಿದ್ಧೇಶ ದಯವಾಗು ॥ ೪ ॥

ಹತ್ತು ಹನ್ನೊಂದನ್ನು ಮತ್ತೆ ಪ್ರಾಣದೊಳಿರಿಸಿ
ಕ್ಷುತ್ತು ಪಿಪಾಸೆ – ಗಳನಳಿದ ಸಿದ್ಧೇಶ
ನಿತ್ಯ ನೀನೆನಗೆ ದಯವಾಗು ॥ ೫ ॥

ಪಾಪದಾ ಪುಂಜವನು ರೂಪಾದ ಕಾಯವನು
ಯೇಪೊತ್ತು ನಾನು – ಹೊರಲಾರೆನೈ ಗುರುವೆ
ಕಾಪಾಲಿ ಸಿದ್ಧ ದಯವಾಗು ॥ ೬ ॥

ಭೂತಕಾಯುವ ನೆಚ್ಚಿ ಘಾತುಕತನದಿಂದೆ
ಪಾತಕವ ಮಾಡಿ – ಪರವನರಿಯದೆ ಕೆಟ್ಟೆ
ಭೂತೇಶ ಸಿದ್ಧ ದಯವಾಗು ॥ ೭ ॥

ಕರ್ಮಕಾಯುವ ನೆಚ್ಚಿ ಮರ್ಮವನು ಅರಿಯದಲೆ
ದುರ್ಮುಖನು ನಾನಾಗಿ – ದುರಿತಕ್ಕೆ ಈಡಾದೆ
ನಿರ್ಮಾಯ ಸಿದ್ಧ ದಯವಾಗು ॥ ೮ ॥

ಮಲಿನ ದೇಹವ ಮೆಚ್ಚಿ ಬಲು ಗರ್ವವದು ಹೆಚ್ಚಿ
ಕಲು ಹೃದಯನಾಗಿ – ಹೊಲಬನರಿಯದೆ ಕೆಟ್ಟೆ
ಮಲಹರನೆ ಸಿದ್ಧ ದಯವಾಗು ॥ ॥ ೯ ॥

ಡಂಬಕದ ಕಾಯುವನು ನಂಬಿ ನಾ ನಿಮ್ಮಡಿಯು
ಹಂಬಲನೆ ಮರೆದೆ – ಬೆಂಬಿಡದು ಭವಮಾಲೆ
ಶಂಭು ಸಿದ್ಧೇಶ ದಯವಾಗು ॥ ೧೦ ॥

ಮನ ಬುದ್ಧಿ ಚಿತ್ತವದು ಬಿನುಗಿನಾಹಂಕಾರ
ಅನುದಿನವು ನಿಮ್ಮ– ನೆನೆಯಲೀಯವು ಗುರುವೆ
ಚಿನುಮಯನೆ ಸಿದ್ಧ ದಯವಾಗು ॥ ೧೧ ॥

ಏಳು ವ್ಯಸನಗಳೆನ್ನ ಬಾಳಲೀಯದೆ ಬಹಳ
ದಾಳಿಯನೆ ಮಾಡಿ – ಕೋಳುವಿಡಿದೈದಾವೆ
ಭಾಳಾಕ್ಷ ಸಿದ್ಧ ದಯವಾಗು ॥ ೧೨ ॥

ಹತ್ತುವಾಯುಗಳೆನ್ನ ಮುತ್ತಿ ಜೀವನ ಶಿರವ
ಕತ್ತರಿಸಲಾಗಿ – ಮತ್ತೆ ಭವದೊಳು ಬಂದೆ
ಮೃತ್ಯುಹರ ಸಿದ್ಧ ದಯವಾಗು ॥ ೧೩ ॥

ಅರಿವರ್ಗದೊಳು ಸಿಲುಕಿ ಬರಿಯ ಭ್ರಮೆಯೊಳು ಬಿದ್ದು
ಹರ ನಿಮ್ಮ ಪದವ – ಮರೆದ ಮಾನವ ನಾನು
ಉರಗಧರ ಸಿದ್ಧ ದಯವಾಗು ॥ ೧೪ ॥

ಪಂಚ ವಿಷಯುಗಳಿಂದ ಸಂಚಲಿಸಿ ನಾ ನಿಮ್ಮ
ಚಿಂತೆಯನು ಮರೆದು – ಹಂಚುಹರಿಯಾಗಿರ್ಪೆ
ಪಂಚಾಕ್ಷರಿಯ ಸಿದ್ಧ ದಯವಾಗು ॥ ೧೫ ॥

ಆಸೆಯಾಮಿಷದಿಂದ ಹೂಸಿ ಹುಂಬನು ಆಗಿ
ದೇಶದೊಳು ಗ್ರಾಸ – ದಾಸೆಗಂ ತಿರುಗುವಗೆ
ಈಶ ಗುರುಸಿದ್ಧ ದಯವಾಗು ॥ ೧೬ ॥

ಆಸೆಯಾ ಶೂಲದೊಳು ವೇಷದಾ ಹೆಣ ನಾನು
ಹೇಸದೇ ಬಿದ್ದು – ಘಾಸಿಯಾದೆನು ಗುರುವೆ
ಶಾಶ್ವತನೆ ಸಿದ್ಧೇಶ ದಯವಾಗು ॥ ೧೭ ॥

ಆಸೆಯಾ ದಾಸನಿಗೆ ವೇಷದಾ ಚೋರನಿಗೆ
ಭಾಷೆ ವಿಹೀನನಿಗೆ – ದೋಷಕೀಡಾದವಗೆ
ಗೋಸಲ ಸಿದ್ಧೇಶ ದಯವಾಗು ॥ ೧೮ ॥

ಬಡಮನದ ಆಸೆಯನು ಒಡೆತನದ ವೇಷವನು
ಪೊಡವಿಯೊಳು ಬಿಡದೆ–ನಡೆಸುವಾ ಪಾಪಿಗೆ
ಮೃಡ ಸಿದ್ಧಲಿಂಗ ದಯವಾಗು ॥ ೧೯ ॥

ಒಂದೊಂದ ಬಯಸುವ ಸಂದೇಹಿ ಮಾನವನ
ಮಂದಮತಿಗಳನು–ಹಿಂದುಗಳೆದೆನ್ನ ಗುರು
ತಂದೆ ಸಿದ್ಧೇಶ ದಯವಾಗು ॥ ೨೦ ॥

[1] ಕರಿಯ ಚೋಹವ ಕೊಟ್ಟು ಮರಿನಾಯ ಕೊಳ್ವವಗೆ [1]
ಗುರು ರೂಪ ಧರಿಸಿ – ನರರಂತೆ ನಡೆವನಿಗೆ
ಕರಿಕಂಠ ಸಿದ್ಧ ದಯವಾಗು ॥ ೨೧ ॥

ಕೋಟಿ ಗೀತವ ಹಾಡಿ ಕೋಟಿ ಶಾಸ್ತ್ರವ ಕೇಳಿ
ಪೋಟಮನ ತನ್ನ– ಆಟವನು ಬಿಡದು ಶಶಿ
ಜೂಟ ಸಿದ್ಧೇಶ ದಯವಾಗು ॥ ೨೨ ॥

ಹಾಲೆರೆಯೆ ಹಾವಿಂಗೆ ಮೇಲೆ ವಿಷವರ್ಧನವು
ಲೀಲೆಯಿಂದೆನಗೆ–ಬೋಧಿಸಲು ಅದರಂತೆ
ಕಾಲಹರ ಸಿದ್ಧ ದಯವಾಗು ॥ ೨೩ ॥

ಸಲೆ ಓದಿ ಗಿಳಿ ತನ್ನ ಮಲವ ಭುಂಜಿಸುವಂತೆ
ಬಲು ಓದಿ ನಾನು–ಮಲ ಮೂರ ಬಿಡಲಾರೆ
ಚೆಲುವ ಗುರುಸಿದ್ಧ ದಯವಾಗು ॥ ೨೪ ॥

ಹೊರಗೆ ವೇಷದ ಸೊಂಪು ಒಳಗೆ [2] ದೋಷದ ಗುಂಪು [2]
ಬರಿಯ ಮಾತುಗಳ–ಬಣಬೆಯಾ ಬಣಗನಿಗೆ
ಪರಮ ಗುರುಸಿದ್ಧ ದಯವಾಗು ॥ ೨೫ ॥

ಹೇಮ ಕಾಮಿನಿ ಭೂಮಿ ನೀ ಮುನ್ನವಿಕ್ಕಿದಾ
ತಾಮಸವು ಎಂದು–ಅರಿಯದಜ್ಞಾನಿಗೆ
ಸ್ವಾಮಿ ಸಿದ್ಧೇಶ ದಯವಾಗು ॥ ೨೬ ॥

ಹೆಂಗಳಂಗದ ಭಂಗಿ ಹಿಂಗದೇ ತಲೆಹತ್ತಿ
ಲಿಂಗವನೆ–ಮರೆದು–ಭಂಗಬಡುತಿದ್ದೇನೆ
ಮಂಗಳಮಯ ಸಿದ್ಧ ದಯವಾಗು ॥ ೨೭ ॥

ನೀಟು ಜೌವನೆಯರಾ ನೋಟದಾ ಸರಳಂಬು
ನಾಟಿ ನಿಜಹೃದಯ–ಪಾಟಿಗೆಟ್ಟವನಿಗೆ
ತೋಂಟದ ಸಿದ್ಧೇಶ ದಯವಾಗು ॥ ೨೮ ॥

ಖುಲ್ಲಸತಿಯರು ತಮ್ಮ ಲಲ್ಲೆಮಾತುಗಳೆಂಬ
ಭಲ್ಲೆಯದಿಂದ–ಇರಿದೆನ್ನ ಕೊಲುತಿಹರು
ಸಲ್ಲಲಿತ ಸಿದ್ಧ ದಯವಾಗು ॥ ೨೯ ॥

---

1 ಕರಿಯ ಚೋಹವ ತೊಟ್ಟು ಮರಿನಾಯಂತೊಳ್ವಗೆ [1]

2 ರೋಷದ ಮೊಟ್ಟೆ [2]

ಸತಿಯಾಗಿ ಸುತೆಯಾಗಿ ಪಿತವಪ್ಪ ತಾಯಾಗಿ
ಅತಿ ಮೋಹದಿಂದ–ಹತಮಾಡುತಿದೆ ಮಾಯೆ
ಶಿತಿಕಂಠ ಸಿದ್ಧ–ದಯವಾಗು ॥ ೩೦ ॥

ಏತ ತಲೆಬಾಗಿದೊಡೆ ಓತು ಗುರುಭಕ್ತನೇ ?*
ಆ ತೆರನಂತೆ–ಎನ್ನಿರವು ಸಿದ್ಧೇಶ
ನೀತಿಹೀನನಿಗೆ ದಯವಾಗು ॥ ೩೧ ॥

ಇಕ್ಕುಳ ಕೈ ಮುಗಿಯಲದಕಕ್ಕುವುದೆ ಭೃತ್ಯತ್ವ?
ಠಕ್ಕ ಮಾನವನಿಗೆ–ಸಿಕ್ಕುವುದೇ ನಿಜಭಕ್ತಿ!
ಮುಕ್ಕಣ್ಣ ಸಿದ್ಧ ದಯವಾಗು ॥ ೩೨ ॥

ಒಡೆಯ ಬಂದರೆ ಕುನ್ನಿ ಬಡಿವಂತೆ ಬಾಲವನು
ಕೊಡದೆ ನಾ ನುಡಿವ–ನುಡಿಯೆಲ್ಲ ಉಪಚಾರ
ಕಿಡಿಗಣ್ಣ ಸಿದ್ಧ ದಯವಾಗು ॥ ೩೩ ॥

ಹಾಡುವಾ ತಂತಿಗೆ ಕೊಡುವುದೆ ನಿಜದರಿವು
ನಾಡ ಮಾತುಗಳ–ಬಣಬೆಯಾ ಬಣಗನಿಗೆ
ರೂಢೀಶ ಸಿದ್ಧ ದಯವಾಗು ॥ ೩೪ ॥

ನವಿಲಾಡಿ ಫಲವೇನು ಶಿವಭಕ್ತಿ ಇಲ್ಲದಲೆ
ಅವರಂತೆ ಎನ್ನ–ನಡೆ ನುಡಿಯು ಸಿದ್ಧೇಶ
ರವಿಕೋಟಿತೇಜ ದಯವಾಗು ॥ ೩೫ ॥

ವರ ಕರಿಗೆ ಸೂಕರನು ಸರಿಯಾಗಲರಿವುದೇ ?
ಹರ ಶರಣರಡಿಗೆ–ನರದೇಹಿ ನಾ ಸರಿಯೆ
ಗುರುಸಿದ್ಧಲಿಂಗ ದಯವಾಗು ॥ ೩೬ ॥

ರಾಜಿಪಾ ರತ್ನಕ್ಕೆ ಗಾಜಿನಮಣಿ ಸರಿಯೆ?
ಮೂಜಗದೊಳಗೆ–ಶರಣರಿಗೆ ನಾ ಸರಿಯೆ
ರಾಜಧರ ಸಿದ್ಧ ದಯವಾಗು ॥ ೩೭ ॥

ಸಲೆ ಕಲ್ಪತರುವಿಂಗೆ ಎಲವದಾ ಮರ ಸರಿಯೆ ?
ಮಲಹರನೆ ನಿಮ್ಮ–ಶರಣರಿಗೆ ನಾ ಸರಿಯೆ
ಸುಲಭಗುರು ಸಿದ್ಧ ದಯವಾಗು ॥ ೩೮ ॥

ಸಾಮ್ಯವಚನ :—

* ಏತ ತಲೆವಾಗಿದಡೇನು, ಗುರುಭಕ್ತನಾಗಬಲ್ಲುದೆ ?
ಇಕ್ಕುಳ ಕೈ ಮುಗಿದಡೇನು, ಭೃತ್ಯಾಚಾರಿಯಾಗಬಲ್ಲುದೆ ?
ಗಿಳಿಯೋದಿದಡೇನು, ಲಿಂಗವೇದಿಯಾಗಬಲ್ಲುದೆ ?
ಕೂಡಲ ಸಂಗನ ಶರಣರು ಬಂದ ಬರವ, ನಿಂದ ನಿಲವ ಅನಂಗಸಂಗಿಗಳೆತ್ತ ಬಲ್ಲರು !

— ಬಸವಣ್ಣನವರು.

ಉತ್ತಮದ ಗರತಿಗೆ ತೊತ್ತು ಸರಿಯಾಗುವಳೆ ?
ಭಕ್ತಿಯುಳ್ಳವರ–ಭೃತ್ಯರಿಗೆ ನಾ ಸರಿಯೆ
ಮೃತ್ಯುಹರ ಸಿದ್ಧ ದಯವಾಗು ॥ ೩೯ ॥

ಪರುಷಕ್ಕೆ ಪಾಷಾಣ ಸರಿಯಾಗಲರಿವುದೆ ?
ಹರ ಶರಣರಡಿಯ - ಕೆರಹಿಂಗೆ ನಾ ಸರಿಯೆ
ಚರಲಿಂಗ ಸಿದ್ಧ ದಯವಾಗು ॥ ೪೦ ॥

ಗುರುತನದ ಗರ್ವವನು ತೊರೆದು ಹರ ಶರಣರ –
ಚರಣಕ್ಕೆ ನಮಿಸಿ – ಮರಣವನು ಗೆಲಿದಿರ್ಪ
ಪರಿಣತೆಯ ಸಿದ್ಧ ದಯವಾಗು ॥ ೪೧ ॥

ಭಕ್ತರಿಗೆ ತೊತ್ತಾಗಿ ನಿತ್ಯ ಸೇವೆಯಮಾಡಿ
ಭಕ್ತರುಂಡೊಕ್ಕು – ಉಳಿದ ಶೇಷವ ಕೊಂಬ
ಭಕ್ತಿಯನೆ ಕೊಟ್ಟು ದಯವಾಗು ॥ ೪೨ ॥

ಏಳೇಳು ಜನ್ಮದೊಳು ಭಾಳಲೋಚನ ನಿಮ್ಮ
ಆಳಿನಾಳಾಗಿ – ಬಾಳುವಾ ಭಕ್ತಿಯೊಂ –
ದೇಳಿಗೆಯ ಕೊಟ್ಟು ದಯವಾಗು ॥ ೪೩ ॥

ಅಚ್ಚ ಶರಣರ ಮನೆಯ ಬಚ್ಚಲಿನ ಕಲ್ಲಾಗಿ
ನಿಚ್ಚ ಮೆಟ್ಟುವರೆ – ಪಾದುಕೆಯು ಆಗಿರುವ
ಇಚ್ಛೆಯನೆ ಸಿದ್ಧ ದಯವಾಗು ॥ ೪೪ ॥

ದಮ್ಮಯ್ಯ ದಯವಾಗು ನಮ್ಮಯ್ಯ ದಯವಾಗು
ನಿಮ್ಮಡಿಯ ಪಡುಗ – ಪಾದುಕೆಯ ಪಿಡಿದಿರುವ
ಪೆರ್ಮೆಯನೆ ಸಿದ್ಧ ದಯವಾಗು ॥ ೪೫ ॥

ಮೇರು ಕಾಗೆಯ ಗುಣವನಾರೈದು ನೋಡುವುದೆ ?*
ಮಾರಾರಿ ಎನ್ನ–ಅವಗುಣವ ನೋಡದಲೆ।
ಕಾರಣಿಕ ಸಿದ್ಧ ದಯವಾಗು ॥ ೪೬ ॥

ತರುನಿಕರ ಗುಣಗಳನು ಸಿರಿಗಂಧ ನೋಡುವುದೆ ?
ವರ ಗುರುವೆ ಎನ್ನ – ಅವಗುಣವ ನೋಡದಲೆ
ಕರುಣದಿಂ ಸಿದ್ಧ ದಯವಾಗು ॥ ೪೭ ॥

ಸಾಮ್ಯವಚನ :— ಮೇರು ಗುಣವನರಸುವುದೆ ಕಾಗೆಯಲ್ಲಿ ?
ಪರುಷ ಗುಣವನರಸುವುದೆ ಕಬ್ಬುನದಲ್ಲಿ ?
ಸಾಧು ಗುಣವನರಸುವುದೆ ಅವಗುಣಿಯಲ್ಲಿ ?
ಚಂದನ ಗುಣವನರಸುವುದೆ ತರುಗಳಲ್ಲಿ ?
ಸರ್ವಗುಣ ಸಂಪನ್ನಲಿಂಗವೇ, ನೀನೆನ್ನಲ್ಲಿ ಅವಗುಣವನರಸುವರೆ,
ಕೂಡಲಸಂಗಮದೇವಾ !
— ಬಸವಣ್ಣನವರು.

ಅತ್ತಿಯಾ ಹಣ್ಣಿನೊಳು ಉತ್ತಮವನರಸುವರೆ ?
ಮತ್ತ ಮಾನವನ – ಚಿತ್ತದವಗುಣಗಳನು
ಬಿತ್ತರಿಪೆ ಸಿದ್ಧ ದಯವಾಗು ॥ ೪೮ ॥

ಪರುಷ ಲೋಹದ ಗುಣವನರಸುವುದೆ ಮದ್ಗುರುವೆ ?
ಪರಿಪೂರ್ಣ ಜ್ಞಾನ – ದಿರವೆ ಎನ್ನವಗುಣವ
ನರಸದಲೆ ಸಿದ್ಧ ದಯವಾಗು ॥ ೪೯ ॥

ಅಯ್ಯ ಗುರುರಾಯನೇ ಹುಯ್ಯಲಿಟ್ಟೆನು ನಿಮಗೆ
ಓ ಎನ್ನದೊಡೆ ನೀ – ಸಾಯೆನ್ನಲಾಗದೇ
ಮಾಯಾರಿ ಸಿದ್ಧ ದಯವಾಗು ॥ ೫೦ ॥

ಅರಿಯದಾ ಮುನ್ನವೇ ಅರಿಯದಂತಿರಿಸದೇ
ಅರುಹಿ ನಿಮ್ಮಡಿಯ – ಮರೆಸುವರೆ ಮದ್ಗುರುವೆ
ಮೊರೆಯಿಟ್ಟೆ ಸಿದ್ಧ ದಯವಾಗು ॥ ೫೧ ॥

ಹುಟ್ಟುಗುರುಡಗೆ ಕೋಲ ಕೊಟ್ಟು ಸೆಳಕೊಂಬುವರೆ
ಮುಟ್ಟಿ ಅಭಯವನು – ಕೊಟ್ಟು ಕೈ ಬಿಟ್ಟರೆ
ಕೆಟ್ಟೆ ಸಿದ್ಧೇಶ ದಯವಾಗು ॥ ೫೨ ॥

ಮುನ್ನ ಜನ್ಮಂಗಳೊಳು ನಿಮ್ಮ ನಾಂ ಬಲ್ಲೆನೇ ?
ಎನ್ನ ನೀ ತಂದು – ನಿಮ್ಮಂತೆ ಮಾಡಿರ್ಪೆ
ಇನ್ನೇಕೆ ಸಿದ್ಧ ದಯವಾಗು ॥ ೫೩ ॥

ಛಂದ ಗಣ ನೇಮವನು ಒಂದನರಿಯದೆ ಮನವು
ಬಂದಂತೆ ನಿಮ್ಮ – [3] ಪಾಡಿದಾ ನಂದಿಗೆ [3]
ಇಂದುಧರ ಸಿದ್ಧ ದಯವಾಗು ॥ ೫೪ ॥

ವರ ಗುರುಸಿದ್ಧನ ಉರುತರದ ಸ್ತೋತ್ರವನು
ಬರೆದೋದಿ ಅರ್ಥವನು – ಪೇಳಿ ಕೇಳ್ದರಿಗೆ
ಪರಶಿವನೊಳೈಕ್ಯ ಇದು ಸಿದ್ಧ ॥ ೫೫ ॥





೩ ಪಾಡಿದಾ ಕಿಂಕರಗೆ ೩

# ಸಿದ್ಧೇಶ್ವರ ಪವಾಡ ರಗಳೆ

ಶ್ರೀಮದ್ಬೋಧಸುಖಾಬ್ಧಿವರ್ಧನವಿಧುಂ ಮುಕ್ತ್ಯಂಗನಾವಲ್ಲಭಂ ।
ಸೋಮಾದಿ ಪೃಥ್ವ್ಯಂತತತ್ತ್ವನಿವಹಕ್ಕಾಧಾರರೂಪಂ ಪರಂ ॥
ಸೀಮಾತೀತ ಸುಕೀರ್ತಿಯುಕ್ತಮಮಲಂ ಭಕ್ತೇಷ್ಟದಂ ಸದ್ಗುಣೋ – ।
ದ್ದಾಮಂ ತೋಂಟದ ಸಿದ್ಧಲಿಂಗನೊಲವಿಂ ರಕ್ಷಿಪ್ಪುದೆಮ್ಮಂ ಸದಾ ॥

ರಗಳೆ ॥ ಶ್ರೀಮದಖಿಳ ತತ್ತ್ವಭುವನ ಜನನವಹುದರಿಂದ ಮುನ್ನ ।
ನಾಮರೂಪಕ್ರಿಯೆಗಳಿಲ್ಲದಿರ್ದು ಮೆರೆದ ಸಿದ್ಧಲಿಂಗ ॥ ೧ ॥

ಸೋಮ ಸೂರ್ಯ ಇಂದ್ರ ಹರಿ ವಿರಂಚಿ ರುದ್ರ ಈಶ್ವರನು ।
ಉಮೆ ಮಹೇಶರಿಂದ ಮುನ್ನ ತೋರಿ ಮೆರೆದ ಸಿದ್ಧಲಿಂಗ ॥ ೨ ॥

ವಿನುತಮಾಯೆ ರಂಜನೆಗಳಿಗಿಂತ ಮುನ್ನನಾದಿ ನಿರಂ ।
ಜನನೆನಿಪ್ಪ ನಾಮದಿಂದಲಿರ್ದು ಮೆರೆದ ಸಿದ್ಧಲಿಂಗ ॥ ೩ ॥

ಅರಿವಿನಿಂದಲರಿವು ಮರವೆರ್ದೋರದಂದು ಜ್ಞಾನಾನಂದ ।
ನೆನಿಸಿ ಪೂರ್ಣಜ್ಞಾನರೂಪನಾಗಿ ಮೆರೆದ ಸಿದ್ಧಲಿಂಗ ॥ ೪ ॥

ದೇಹಗುಣವು ಹುಟ್ಟದಂದು ನಿರ್ಮಲನುಮೆನಿಪ್ಪ ನಾಮ ।
ರೂಹುದೋರಿ ಶುದ್ಧಕಾಯನಾಗಿ ಮೆರೆದ ಸಿದ್ಧಲಿಂಗ ॥ ೫ ॥

ಸ್ನೇಹ ಮೋಹ ಭ್ರಾಂತು ಭ್ರಮೆಗಳಿಲ್ಲದಂದು ಭಕ್ತಕಾಯ ।
ಗೇಹವಾಗಿ ಜಗಕೆ ಕುರುಹುದೋರಿ ಮೆರೆದ ಸಿದ್ಧಲಿಂಗ ॥ ೬ ॥

ಸಕಲಲೋಕ ಜನಹಿತಾರ್ಥವಾಗಿ ಸರ್ವಜನರುಗಳಿಗೆ ।
ಮುಕುತಿಗೊಡುವೆನೆಂದು ಬಂದು ಚರಿಸಿ ಮೆರೆದ ಸಿದ್ಧಲಿಂಗ ॥ ೭ ॥

ಅಕುಟಿಲಾತ್ಮ ನಿನಗೆ ಗೋಣಿಖೇಡದಲ್ಲಿ ಕುಂಬಳೇಶ ।
ಭಕುತಿ ಮಾಡಲಲ್ಲಿ ಭಕ್ತಿಗೊಂಡು ಮೆರೆದ ಸಿದ್ಧಲಿಂಗ ॥ ೮ ॥

~~~~~~~~

ಆಕರ: ಶ್ರೀ ತೋಂಟದಾರ್ಯ ರಗಳೆ. ಸಂ: ಶ್ರೀ ಫ. ಗು. ಹಳಕಟ್ಟಿ, ವಿಜಾಪುರ. ಶಿವಾನುಭವ ಗ್ರಂಥಮಾಲಾ ಸಂ. ೯. (೧೯೨೭) ಬೆಲೆ ೨ ಆಣೆ.
~~~~~~~~

ಮಹಬಳೇಶಲಿಂಗದುತ್ತಮಾಂಗದಲ್ಲಿ ಗಂಗೆ ಬತ್ತೆ ।
ವಹಿಲದಿಂದ ಪಾದವಿಟ್ಟು ತೋರಿ ಮೆರೆದ ಸಿದ್ಧಲಿಂಗ ॥ ೯ ॥

ಕುಹಕಿದಾಸನೋರ್ವನುಳುವೆಯಲ್ಲಿ ಗ್ರಹವನೊಂದ ಬಿಡಲು ।
ಅಹಿತದಿಂದಲದಕೆ ಭೀತಿಗೊಳಿಸಿ ಮೆರೆದ ಸಿದ್ಧಲಿಂಗ ॥ ೧೦ ॥

ರಾಗದಿಂದಕಾರಗಳದಿ(?)ವಾದಿಸಲ್ಕೆ ಬಸವ ತಾನು ।
ಹೋಗಿ ಜೈನರುಗಳ ಬಾಧೆಗೊಳಿಸಿ ಮೆರೆದ ಸಿದ್ಧಲಿಂಗ ॥ ೧೧ ॥

ಗಾಳಿಪೂಜೆಯಲ್ಲಿ ಮಲ್ಲಿನಾಥಜಂಗಮಸ್ವರೂಪ ।
ತಾಳಿ ಬಂದು ನಿನಗೆ ಭಕ್ತಿಮಾಡಿ ಮೆರೆದ ಸಿದ್ಧಲಿಂಗ ॥ ೧೨ ॥

ನೀಲಕಂಠ ಕಾಶಿ ಗಯೆ ಪ್ರಯಾಗ ಕೊಲ್ಲಿಪಾಕಿ ಪರ್ವ – ।
ತಾಳಿ ಲಿಂಗಕ್ಷೇತ್ರದಲ್ಲಿ ಚರಿಸಿ ಮೆರೆದ ಸಿದ್ಧಲಿಂಗ ॥ ೧೩ ॥

ಶಬರರ ಪಡೆ ಬಂದು ಕಗ್ಗೆರೆಯನು ಸೂರೆಗೊಂಬರೆಂದು ।
ಶುಭದಿ ಭಕುತರುಗಳ ಕಡೆಗೆ ಕಳುಹಿ ಮೆರೆದ ಸಿದ್ಧಲಿಂಗ ॥ ೧೪ ॥

ಅಭವಧ್ಯಾನದಿಂದ ಕಗ್ಗೆರೆಯೊಳು ಹುತ್ತ ವೇಳೆ ಕುಳಿತು ।
ವಿಭವದಿಂದಲಾರುಮಾಸವಿರ್ದು ಮೆರೆದ ಸಿದ್ಧಲಿಂಗ ॥ ೧೫ ॥

ಕ್ರೂರಸರ್ಪರೂಪನಿಂದಲೀಶ ಬಂದು ಗೃಹವ ಕಾಯ್ದು ।
ಚೋರರೆಲ್ಲರುಗಳ ಭೀತಿಬಿಡಿಸಿ ಮೆರೆದ ಸಿದ್ಧಲಿಂಗ ॥ ೧೬ ॥

ಸೇರಿ ಭೂತವೆರಡು ಕಗ್ಗೆರೆಯೊಳು ನಿಮ್ಮ ಪೂಜಿಸಲ್ಕೆ ।
ಚಾರು ಮೋಕ್ಷಪದವನವಕೆ ಕೊಟ್ಟು ಮೆರೆದ ಸಿದ್ಧಲಿಂಗ ॥ ೧೭ ॥

ಉರಗನೊಂದು ಕಗ್ಗೆರೆಯೊಳು ನಿಮ್ಮ ಚರಣದಷ್ಟದಿಂದೆ ।
ಮರಣವೆಯ್ದಲದಕೆ ಹರಣವಿತ್ತು ಮೆರೆದ ಸಿದ್ಧಲಿಂಗ ॥ ೧೮ ॥

ಮರಣದಿಂದಲುರಗಯೆಡೆಯೂರಿಂಗೆ ಹೋದ ಪಥದೊಳಿರಲು ।
ಹರಣಗೊಟ್ಟು ಶಾಂತಿಗುಣವನಿತ್ತು ಮೆರೆದ ಸಿದ್ಧಲಿಂಗ ॥ ೧೯ ॥

ಜಲವು ಬೇಸಗೆಯಲೆಡೆಯೂರೊಳಗಿರದಿರಲು ತೋರಿ ।
ಒಲಿದು ಜಲವನುಕ್ಕಿಸಿ ಸಲೆ ಪಸರಿ ಮೆರೆದ ಸಿದ್ಧಲಿಂಗ ॥ ೨೦

ಅಳಿಯೆ ಗೃಹ ದಹನದಿ ತನ್ನ ಶಿಶುಗಳೆಂದು ಬೆಕ್ಕು ದುಃಖ ।
ಗೊಳಲೆಡೆಯೂರಲ್ಲಿ ಪ್ರಾಣವಿತ್ತು ಮೆರೆದ ಸಿದ್ಧಲಿಂಗ ॥ ೨೧ ॥

ಗಾಡಿಯಿಂದೆಡೆಯೂರಿನಲ್ಲಿ ಸಿಡಿಲು ನಿಮ್ಮ ಪದವ ಪೂಜೆ ।
ಮಾಡಲದಕೆ ಮುಕ್ತಿಗೊಟ್ಟು ಕಳುಹಿ ಮೆರೆದ ಸಿದ್ಧಲಿಂಗ ॥ ೨೨ ॥

ರೂಢಿಯರಿಯೆ ಹೊಳಲುಗುಂದದಲ್ಲಿ ಮಹಾದೇವಿ ಭಕ್ತಿ ।
ಮಾಡಲವಳ ಭಕ್ತಿ ಭಿಕ್ಷೆಗೊಂಡು ಮೆರೆದ ಸಿದ್ಧಲಿಂಗ ॥ ೨೩ ॥

ಮಳೆಯು ಬರಲು ನಾಗಸರಧಿಯಲ್ಲಿ ಕಲ್ಲಿನಾಥ ತನ್ನ ।
ನಿಳಯದಲ್ಲಿ ಕದವ ತೆರೆಯೆ ಪೊಕ್ಕು ಮೆರೆದ ಸಿದ್ಧಲಿಂಗ ॥ ೨೪ ॥

ಸುಲಭದಿಂದ ತನ್ನಗಲಕ್ಕೆ ಹೋಹ ಹಾದಿಯಲ್ಲಿ ನದಿಯು ।
ಮಳಲುಗಾಂಬ ತೆರದಿ ಪಥವನೀಯೆ ಮೆರೆದ ಸಿದ್ಧಲಿಂಗ ॥ ೨೫ ॥

ವಿರತಿಗಾಣಲೆಂದು ವ್ಯಾಘ್ರಪುರದ ಪಥದಿ ಹರನು ಶಬರ – ।
ನಿರವಿನಿಂದ ಬರಲು ವಸನವಿತ್ತು ಮೆರೆದ ಸಿದ್ಧಲಿಂಗ ॥ ೨೬ ॥

ಜ್ವರದ ಬಾಧೆಯಿಂದ ವ್ಯಾಘ್ರಪುರದ ಮನುಜರೆಲ್ಲರಳಿವು – ।
ತಿರಲು ಜ್ವರವ ಬಿಡಿಸಿಯವರ ಸಲಹಿ ಮೆರೆದ ಸಿದ್ಧಲಿಂಗ ॥ ೨೭ ॥

ಚಿತ್ರಕಾಯಪುರದ ಹೇಮಗಿರಿಯ ಗೋತ್ರಕಮಲಭೂಜ ।
ಪತ್ರಶತಸಮೇತ ಕುಸುಮವೀಯೆ ಮೆರೆದ ಸಿದ್ಧಲಿಂಗ ॥ ೨೮ ॥

ಮುತ್ತುಗೂಡಿ ಮೂಗುತಿಯನು ಮುಡಿಯಲಿರಿಸಿ ಜ್ಯೋತಿಹಸ್ತ।
ವೆತ್ತಿ ವ್ಯಾಘ್ರಪುರದಿ ಸುಸಂಭ್ರಮದಿ ಮೆರೆದ ಸಿದ್ಧಲಿಂಗ ॥ ೨೯ ॥

ಪುರುಷನೊಡನೆ ಗಮನವಪ್ಪ ಸತಿಯು ವಂದಿಸಲ್ಕೆ ವ್ಯಾಘ್ರ।
ಪುರದಿಯವಳ ಪುರುಷಗಸುವನಿತ್ತು ಮೆರೆದ ಸಿದ್ಧಲಿಂಗ ॥ ೩೦ ॥

ನಿರುತದಿಂದ ಪೋದೂರಿಂಗೆ ಹೋಹ ಪಥದಿ ಕಣ್ಣುಗೆಟ್ಟು।
ಇರಲು ಚೋರರಿಂಗೆ ಕಂಗಳಿತ್ತು ಮೆರೆದ ಸಿದ್ಧಲಿಂಗ ॥ ೩೧ ॥

ಸುದತಿ ಹೆಬ್ಬೂರಲ್ಲಿ ರಂಭಫಲದ ಶೇಷವನ್ನು ಬಸವ ।
ನಿದಿರಲಿರಿಸಿ ಶಿಲೆಯಬಸವ ಸವಿಯೆ ಮೆರೆದ ಸಿದ್ಧಲಿಂಗ ॥ ೩೨ ॥

ಉದಕವಿಕ್ಷುದೋಟಕಿಲ್ಲದಿರಲು ಹೆಬ್ಬೂರಿನಲಿ ಓರ್ವ ।
ಮುದದಿ ನೆನೆದು ಅಗಿಯೆ ಜಲವ ತೋರಿ ಮೆರೆದ ಸಿದ್ಧಲಿಂಗ ॥ ೩೩ ॥

ಹೇರೂರಲ್ಲಿ ಜಂಬುನೇರಿಲೊಂದು ಪೂರ್ಣಫಲಗಳಿಂದ ।
ಸಾರಿ ಭಕ್ತಿ ಮಾಡಲೊಲಿದು ಸವಿದು ಮೆರೆದ ಸಿದ್ಧಲಿಂಗ ॥ ೩೪ ॥

ನಾರಿ ಬತ್ತಗುದಿಸುತಿರಲು ಹೊನ್ನುಡಿಕೆಯೊಳೊಡೆಯೆ ಘಟವು ।
ನೇರಿತಾಗೆ ಕೂಡೆ ಆಣೆಯಿಡಲು ಮೆರೆದ ಸಿದ್ಧಲಿಂಗ ॥ ೩೫ ॥

ಚನ್ನಪಟ್ಟಣದಲಿ ದಾಸನೋರ್ವ ನೋಡಬಾರದೆಂದು ।
ತನ್ನ ಮೊಗವ ತಿರುಹಿ ಸ್ತಂಭವಿತ್ತು ಮೆರೆದ ಸಿದ್ಧಲಿಂಗ ॥ ೩೬ ॥

ನಿನ್ನ ಪಾದ ಜಲದ ಭಾಂಡ ಕಲುಕುಣಿಕೆಯೊಳೊಡೆದು ಅಲ್ಲಿ ।
ನನ್ನಿಯಿಂದ ಲಿಂಗರೂಪಿಲುದಿಸಿ ಮೆರೆದ ಸಿದ್ಧಲಿಂಗ ॥ ೩೭ ॥

ಸದನಕಿದಿರುದೋರುಬಾಳೆ ಗೊನೆ ಬಿಡಲ್ಕೆ ಆಣೆಯಿಡಲು ।
ಮುದದಿ ಹುಚಿ ಹಟ್ಟಿಯಲ್ಲಿ ತಿರುಗಿ ಮೆರೆದ ಸಿದ್ಧಲಿಂಗ ॥ ೩೮ ॥

ಮುದದೊಳೋರ್ವದಾಸ ಲಿಂಗಪುರದಿ ನಿಂದಿಸಲ್ಕೆ ಹಲ್ಲ ।
ನುದುರುವಂತೆ ವಾಸುದೇವ ಹೊಡೆಯೆ ಮೆರೆದ ಸಿದ್ಧಲಿಂಗ ॥ ೩೯ ॥

ವೃಷಭಪುರದಿ ಮೀಸಲಾದ ಬದನೆಕಾಯನೋರ್ವ ನಾರಿ ।
ಒಸೆದು ಅಗ್ನಿಗಿಡಲು ಬೇಯದಿರಲು ಮೆರೆದ ಸಿದ್ಧಲಿಂಗ ॥ ೪೦ ॥

ಹುಸಿಯುದವಳು ನಿಮಗೆ ಕಾಯ ತೋರೆ ಬಂಜೆ ನಿನಗೆ ಮುಂದೆ ।
ಶಿಶುಗಳಪ್ಪವೆಂದು ಮರಳಿಕೊಟ್ಟು ಮೆರೆದ ಸಿದ್ಧಲಿಂಗ ॥ ೪೧ ॥

ಜ್ವರದ ಭೀತಿಗಂಜಿ ವೃಷಭಪುರದಿ ಬಾಗಿಲಿಕ್ಕಿ ಭಕ್ತ।
ರಿರಲು ಕದವ ತೆಗೆದು ತಳಿಗೆಗೊಡಿಸಿ ಮೆರೆದ ಸಿದ್ಧಲಿಂಗ ॥ ೪೨ ॥

ತರುಣಿಯೋರ್ವಳಿಲ್ಲವೆಂದು ರಾತ್ರಿಯಲ್ಲಿ ತಳಿಗೆಗೊಡದೆ ।
ಇರಲದೃಶ್ಯವಾಗೆ ಮರಳಿ ಕೊಡಿಸಿ ಮೆರೆದ ಸಿದ್ಧಲಿಂಗ ॥ ೪೩ ॥

ಮಲ್ಲಿಶೆಟ್ಟಿ ವೃಷಭಪುರದಿ ತೀರ್ಥವನ್ನು ವಾರಿ ಸೆಜ್ಜೆ।
ಯಲ್ಲಿ ಲಿಂಗವಿಲ್ಲದಿರಲು ಕೊಟ್ಟು ಮೆರೆದ ಸಿದ್ಧಲಿಂಗ ॥ ೪೪ ॥

ಎಲ್ಲ ಭಕ್ತರುಗಳು ಕ್ಷೀರವಾರುಕೊಳಗವನ್ನು ಶಿರದಿ ।
ನಿಲ್ಲದೊತ್ತಿರಂಧ್ರ ಹೀರುತಿರಲು ಮೆರೆದ ಸಿದ್ಧಲಿಂಗ ॥ ೪೫ ॥

ವನಿತೆ ವೃಷಭಪುರದಿ ಶೇಷಕುಸುಮಗೊಡಲು ಸಾಕೆನಲ್ಕೆ।
ಮಿನುಗುತಿರ್ಪ ಲಿಂಗಬಯಲನೆಯ್ದೆ ಮೆರೆದ ಸಿದ್ಧಲಿಂಗ ॥ ೪೬ ॥

ವಿನುತ ಭಸಿತಘಟಿಕೆಯು ತುಮುಕುರಲ್ಲಿ ವೈಷ್ಣವನಿಗೆ ಲಿಂಗ ।
ವೆನಿಸಿ ಕೊಟ್ಟು ಭಕ್ತರೂಪ ಮಾಡಿ ಮೆರೆದ ಸಿದ್ಧಲಿಂಗ ॥ ೪೭ ॥

ಮಲ್ಲಿಯಂಬಳಕ್ಕಿ ಆರು ಕೊಳಗಮಿರಲದರಲಿ ಪಡಿಯ ।
ನಿಲ್ಲದೊಂದ ತೆಗೆಯೆ ಬಯಲ ಮಾಡಿ ಮೆರೆದ ಸಿದ್ಧಲಿಂಗ ॥ ೪೮ ॥

ಬೆಲ್ಲ ನಾಲ್ಕುನೂರು ಹರಕೆಯಲ್ಲಿ ನಂಟಗೆಂದು ವೊಂದು ।
ಬೆಲ್ಲದೆಗೆಯಲೆಲ್ಲ ಬಯಲವಾಗೆ ಮೆರೆದ ಸಿದ್ಧಲಿಂಗ ॥ ೪೯ ॥

ಏಳುನೂರು ನಾರಿಕೇಳದಲ್ಲಿಯೊಂದು ಪ್ರಭುವಣಿಜ್ಯ।
ಬಾಲಕಂಗೆ ಈಯಲುದಕ ಹಿಂಗೆ ಮೆರೆದ ಸಿದ್ಧಲಿಂಗ ॥ ೫೦ ॥

ಚೌಳುನೀರತೀರ್ಥವನ್ನು ಚರಕೆ ಕೊಟ್ಟು ಸ್ವಾದ ಜಲದಿ ।
ಬಾಲೆ ತೀರ್ಥವಡೆಯೆ ಬಯಲ ಮಾಡಿ ಮೆರೆದ ಸಿದ್ಧಲಿಂಗ ॥ ೫೧ ॥

ಪ್ರಸವವೆರಡರೆಣಿಕೆಯಿಂದಲಿತ್ತು ಮುದ್ದವಣಿಜನರಸಿ ।
ಕುಸುಮವಿಸರವಿರಿಸಲೆರಡನಿರಿಸಿ ಮೆರೆದ ಸಿದ್ಧಲಿಂಗ ॥ ೫೨ ॥

ಮಿಸುಪ ನೆಲ್ಲವರೆಯ ಕಾಯ ಮೀಸಲಿರಿಸಿ ಭಕ್ತನೋರ್ವ –।
ನೊಸೆದು ಪಚನಗೈಯ್ಯೆ ಬೇಯದಿರಲು ಮೆರೆದ ಸಿದ್ಧಲಿಂಗ ॥ ೫೩ ॥

ಹೊಲದೊಳಿರ್ಪವರೆಯ ಕಾಯ ಹರಕೆದೆಗೆದು ಓರ್ವ ಪಚನ ।
ಗೊಳಿಸೆ ಪಾವಕಂಗೆ ಆಜ್ಞೆಯಿತ್ತು ಮೆರೆದ ಸಿದ್ಧಲಿಂಗ ॥ ೫೪ ॥

ಹಲಗೆಶೆಟ್ಟಿಗೊಲಿದು ಅವನ ಗೃಹದಿ ಕುಳಿತು ದ್ರೋಣಪುಷ್ಪ।
ಮಳೆಯನೆಲ್ಲರರಿವ ತೆರದಿ ಕರೆಸಿ ಮೆರೆದ ಸಿದ್ಧಲಿಂಗ ॥ ೫೫ ॥

ಗೋಣಿಕಾರಕುಲದಿ ನಾರಿ ಹರವಿ ಕೆರೆಯೊಳೆಯ್ದುತಿರಲು ।
ಆಣೆಯಿಕ್ಕಲದನು ಮರಳಿ ಬರಿಸಿ ತೋರಿ ಮೆರೆದ ಸಿದ್ಧಲಿಂಗ ॥ ೫೬ ॥

ಪಾನಿ ದುಂಬಿಯೆತ್ತಿ ಬಾರದಿರಲು ಆಣೆಯಿಕ್ಕಿ ಸುಲಭ –।
ಗಾಣಿಸಲ್ಕೆ ತಂದು ಪೂಜೆಮಾಡಿ ಮೆರೆದ ಸಿದ್ಧಲಿಂಗ ॥ ೫೭ ॥

ಪರಿಷೆಯಲ್ಲಿಯೊಂದನಡ್ವ ಬೆದರಿ ಹೊರಬಿಸುಟ್ಟು ಓಡೆ ।
ತ್ವರಿತದಿಂದ ಆಣೆಯಿಡಲು ಬರಿಸಿ ಮೆರೆದ ಸಿದ್ಧಲಿಂಗ ॥ ೫೮ ॥

ಸ್ಥಿರದಿ ತುಮುಕುರಲ್ಲಿಯಿರ್ದ ರಾತ್ರಿಯಲ್ಲಿ ಕಣೆಯ ಕಲ್ಲೊ।
ಳಿರುತಲವರು ಮಾಳ್ಪ ಭಕ್ತಿಗೊಂಡು ಮೆರೆದ ಸಿದ್ಧಲಿಂಗ ॥ ೫೯ ॥

ತಿಗುಳಗೋರ್ವಗೊಲಿದ ರಾತ್ರಿ ದೇವರಾಯ ಪತ್ತನದಲಿ ।
ಸೊಗಯಿಪಂತೆ ತೂಬನೆತ್ತಿ ಕೊಟ್ಟು ಮೆರೆದ ಸಿದ್ಧಲಿಂಗ ॥ ೬೦ ॥

ಬಗೆಯಲೊಂದು ರಾತ್ರಿಯಲ್ಲಿ ಗ್ರಾಮ ಮೂರರಲ್ಲಿಯಿರ್ದು ।
ಜಗಕೆ ಚೋದ್ಯವಾಗಿ ಮಹಿಮೆದೋರಿ ಮೆರೆದ ಸಿದ್ಧಲಿಂಗ ॥ ೬೧ ॥

ಆಳಗೆಯೊಂದು ಓದನವನ್ನೈನೂರು ಜಂಗಮಕ್ಕೆ ತೃಪ್ತಿ।
ಗೊಳಿಸಿ ದೇವರಾಯಪತ್ತನದಲಿ ಮೆರೆದ ಸಿದ್ಧಲಿಂಗ ॥ ೬೨ ॥

ಮಳೆಯು ಬರಲು ದೇವರಾಯ ಪತ್ತನದಲಿ ಭಕ್ತ ಜನರು ।
ಸಲಿಸುವನ್ನ ನಿಲಿಸಿ ಮರಳಿ ಕರೆಸಿ ಮೆರೆದ ಸಿದ್ಧಲಿಂಗ ॥ ೬೩ ॥

ಕಂಗಳುದಯ ಕಾಲದಿಂದಲಿಲ್ಲದವನು ನಿಮ್ಮ ಪದಯು –।
ಗಂಗಳೊತ್ತುಗೈಯ್ಯೆ ಕಂಗಳಿತ್ತು ಮೆರೆದ ಸಿದ್ಧಲಿಂಗ ॥ ೬೪ ॥

ಮಂಗವಾಡದಿಂದ ಪರ್ವಸೆಟ್ಟಿ ಲಿಂಗಯುಮ್ಮ ಬರಲು ।
ಅಂಗಭಾವವಳಿದು ಹರಣವಿತ್ತು ಮೆರೆದ ಸಿದ್ಧಲಿಂಗ ॥ ೬೫ ॥

ತರುಣಿ ತಡೆಯಲಿರದೆ ರಾಯಮಾರ್ಗದಿಂದ ಮಲ್ಲಿಸೆಟ್ಟಿ ।
ಬರಲು ಮಹಿಷಿಯಳಿಯೆ ಪ್ರಾಣವಿತ್ತು ಮೆರೆದ ಸಿದ್ಧಲಿಂಗ ॥ ೬೬ ॥

ಬುರುಡುಗುಂಪೆಯಿಂದ ಗಬ್ಬಿರಾಜ ಬರಲಿಕವನ ವಾಜಿ ।
ಮರಣವೆಯಿದಲದಕೆ ಹರಣವಿತ್ತು ಮೆರೆದ ಸಿದ್ಧಲಿಂಗ ॥ ೬೭ ॥

ಭಿಕ್ಷವೃತ್ತಿರಾಯನಿತ್ತ ಸ್ವರ್ಣಗಂತೆ ರನ್ನಮುಕುಟ ।
ಕಕ್ಷೆಯೊಳಗೆ ಚರನು ಬರಲ್ಕೆ ಇತ್ತು ಮೆರೆದ ಸಿದ್ಧಲಿಂಗ ॥ ೬೮ ॥

ಅಕ್ಷಿಕರ್ಣದಪ್ಪದಿಂದಲಳಿದ ಜಂಗಮಕ್ಕೆ ಸರ್ವ ।
ರೀಕ್ಷಿಸಲ್ಕೆ ಒಲಿದು ಹರಣವಿತ್ತು ಮೆರೆದ ಸಿದ್ಧಲಿಂಗ ॥ ೬೯ ॥

ಚಕ್ಷುಹೀನ ಜಂಗಮಯ್ಯ ಕುಂತಳಾಖ್ಯ ದೇಶದಿಂದ ।
ವೀಕ್ಷಿಸಲ್ಕೆ ಬರಲು ಕಂಗಳಿತ್ತು ಮೆರೆದ ಸಿದ್ಧಲಿಂಗ ॥ ೭೦ ॥

ಅಕ್ಷಯಾಘಚರಿತ ಜೈನ ಚಿಕ್ಕ ನಿಂದಿಸಲ್ಕೆ ಅಗ್ನಿ।
ಭಕ್ಷಗೈಯ್ಯೆ ಗೃಹವ ಹಲುಕುರಲ್ಲಿ ಮೆರೆದ ಸಿದ್ಧಲಿಂಗ ॥ ೭೧ ॥

ಒಸೆದು ಮಜ್ಜನಕ್ಕೆ ಬೇಸಗೆಯಲ್ಲಿ ಜಲವದಿಲ್ಲದಿರಲು ।
ಮಿಸುಪ ಕೂಪದಲ್ಲಿ ಗಂಗೆ ಬರಲು ಮೆರೆದ ಸಿದ್ಧಲಿಂಗ ॥ ೭೨ ॥

ಬಸವ ಕೇತಶರಧಿಯಲ್ಲಿ ಆರುದಿವಸ ಮೋಹಬಿಟ್ಟು।
ಉಸಿಕನಿರಲು ಆಣೆಯನ್ನು ಬಿಡಿಸಿ ಮೆರೆದ ಸಿದ್ಧಲಿಂಗ ॥ ೭೩ ॥

ರಥವನಡರಿ ಕೇತ ಶರಧಿಯಲ್ಲಿ ನಡೆದು ಬರಲು ಮುರಿಯೆ ।
ಕ್ಷಿತಿಯೊಳಾಣೆಯಿಡಲು ನೇರಿತಾಗೆ ಮೆರೆದ ಸಿದ್ಧಲಿಂಗ ॥ ೭೪ ॥

ಸ್ತುತಿಸಿ ತಿಗುಳ ದೇಶದಿಂದ ಬಂದ ವೀರ ದೇಶಿಕಂಗೆ ।
ಹಿತವದಾದ ನಯನ ಚರಣವಿತ್ತು ಮೆರೆದ ಸಿದ್ಧಲಿಂಗ ॥ ೭೫ ॥

ಹೆಡ್ಡ ದ್ವಿಜನದೋರ್ವ ನಿಂದಿಸಲ್ಕೆ ವಜ್ರದುಂಬಿನಿವಹ ।
ಚಡ್ಡಿಗೊಳ್ಳದವನ ಬಾಧೆಗೊಳಿಸಿ ಮೆರೆದ ಸಿದ್ಧಲಿಂಗ ॥ ೭೬ ॥

ಒಡ್ಡರೆಲ್ಲ ಕೋಡಿಹಳ್ಳಿಯಲ್ಲಿ ಪರ್ವವೆಸಗಿ ಯೆಡೆಯ ।
ದೊಡ್ಡಿತಾಗಿ ಇಡಲದೃಶ್ಯವೆನಿಸಿ ಮೆರೆದ ಸಿದ್ಧಲಿಂಗ ॥ ೭೭ ॥

ಮಡದಿ ಬೆಳ್ಳವೆಯಲಿಯಡುತ ಪಾಕ ಕೊಡನದೆಯ್ದೆ।
ತಡಿಗೆ ಆಣೆಯಿಡಲು ನಡಿಸಿ ಬರಿಸಿ ಮೆರೆದ ಸಿದ್ಧಲಿಂಗ ॥ ೭೮ ॥

ಕಡಬದಲ್ಲಿ ಒಂದು ಗೃಹದಿ ಮೂರ್ತಿಗೊಂಡಿರಲ್ಕೆ ಭವಿಯು ।
ಒಡನೆ ಬರಲು ಕದವು ಮುದ್ರಿಸಲ್ಕೆ ಮೆರೆದ ಸಿದ್ಧಲಿಂಗ ॥ ೭೯ ॥

ವೇಪರಾಳಿಯಲ್ಲಿ ಲಿಂಗರೂಪಿನಿಂದಲುದಿಸಿ ಲೋಕ ।
ವ್ಯಾಪಿಪಂತೆ ಭರದಿ ಮಳೆಯ ಕರೆಸಿ ಮೆರೆದ ಸಿದ್ಧಲಿಂಗ ॥ ೮೦ ॥

ದೀಪಿಸುತ್ತಲುರುವಕೊಂಡೆಯಲ್ಲಿ ಲಿಂಗರೂಪಿನಿಂದ ।
ಸ್ಥಾಪ್ಯವಾಗಿ ಸರ್ವಜನಕೆ ತೋರಿ ಮೆರೆದ ಸಿದ್ಧಲಿಂಗ ॥ ೮೧ ॥

ಕುರುಬರೆಲ್ಲ ಕೂಡಿ ಬಿದಿರೆಯಲ್ಲಿ ಪರ್ವವೆಸಗಿ ಯೆಡೆಯ – ।
ನಿರಿಸಿ ಬಯಲ ಮಾಡಿ ವರವನಿತ್ತು ಮೆರೆದ ಸಿದ್ಧಲಿಂಗ ॥ ೮೨ ॥

ಉರಗದಪ್ಪದಿಂದ ಚಿಕ್ಕಬಸವ ನಿಮ್ಮ ಆಣೆಯಿಡಲು ।
ಗರಳವಿಳಿಹಿ ಮುಗುಳುರಲ್ಲಿ ಸಲಹಿ ಮೆರೆದ ಸಿದ್ಧಲಿಂಗ ॥ ೮೩ ॥

ಇಂತು ಎಪ್ಪತ್ತೈದು ಮುಖ್ಯವಾದನಂತ ಮಹಿಮೆದೋರಿ ।
ಚಿಂತಿತಾರ್ಥವಿತ್ತು ಜಗವ ಸಲಹಿ ಮೆರೆದ ಸಿದ್ಧಲಿಂಗ ॥ ೮೪ ॥

ಕಂತು ಕಾಲಮರಣಭಯವ ಪೂಜಿಸುತ್ತಲಿಪ್ಪ ಭಕ್ತ।
ತಿಂಥಿಣಿಗವುಗಳನು ದೂರವೆನಿಸಿ ಮೆರೆದ ಸಿದ್ಧಲಿಂಗ ॥ ೮೫ ॥

ಸಕಲ ಜಗವ ನೆನಹು ಮಾತ್ರದಿಂದ ಸಲಹಿ ವೀರಶೈವ ।
ಯುಕುತರಿಂಗೆ ಜ್ಞಾನಬೋಧೆಯಿತ್ತು ಮೆರೆದ ಸಿದ್ಧಲಿಂಗ ॥ ೮೬ ॥

ಭಕುತ ಮೊದಲೆನಿಪ್ಪ ಆರುಸ್ಥಲ ಷಡುಸ್ಥಲಜ್ಞಾನರಪ್ಪ ।
ಮುಕುತಿವಾಂಛಿತರ್ಗೆ ಬೋಧಿಸುತ್ತ ಮೆರೆದ ಸಿದ್ಧಲಿಂಗ ॥ ೮೭ ॥

ಈಷಣತ್ರಯಕ್ಕತೀತನೆನಿಸಿ ಮೆರೆದ ಸಿದ್ಧಲಿಂಗ ॥ ೮೮ ॥

ಕ್ಲೇಶಪಂಚಕಂಗಳನ್ನು ದಹಿಸಿ ಮೆರೆದ ಸಿದ್ಧಲಿಂಗ ॥ ೮೯ ॥

ರೋಷಪಾಶಗಳನು ಹಿಟ್ಟುಗುಟ್ಟಿ ಮೆರೆದ ಸಿದ್ಧಲಿಂಗ ॥ ೯೦ ॥

ಈಶಭಾವದಲ್ಲಿ ಮನವ ಮುಟ್ಟಿ ಮೆರೆದ ಸಿದ್ಧಲಿಂಗ ॥ ೯೧ ॥

ಷಟ್‌ಸ್ಥಲಜ್ಞ ಸಿದ್ಧಲಿಂಗ । ಶರಣ ಸೂಜ್ಞ ಸಿದ್ಧಲಿಂಗ ॥ ೯೨ ॥

ಶಿಷ್ಯಪಾಲ ಸಿದ್ಧಲಿಂಗ । ಶಿವಗೆ ಮೂಲ ಸಿದ್ಧಲಿಂಗ ॥ ೯೩ ॥

ಮಂಗಲಾಂಗ ಸಿದ್ಧಲಿಂಗ । ಮಾಯಭಂಗ ಸಿದ್ಧಲಿಂಗ ॥ ೯೪ ॥

ಲಿಂಗಸಂಗ ಸಿದ್ಧಲಿಂಗ । ಲಿಖಿತಲಿಂಗ ಸಿದ್ಧಲಿಂಗ ॥ ೯೫ ॥

ಕರಣ ಹರಣ ಸಿದ್ಧಲಿಂಗ । ಕರುಣಾಭರಣ ಸಿದ್ಧಲಿಂಗ ॥ ೯೬ ॥

ಶರಣವರಣ ಸಿದ್ಧಲಿಂಗ । ಶರಣು ಶರಣು ಸಿದ್ಧಲಿಂಗ ॥ ೯೭ ॥

*

ಕಂದ ॥

ಉತ್ಸಾಹವೆಸಗಿದ ಮನದಿಂ – ।
ದುತ್ಸಾಹಜಗಕಾಗಲೆಂದು ಸಿದ್ಧೇಂದ್ರನ ಮಹಿ ॥
ಮೋತ್ಸವರಗಳೆಯ ಶರಣ ।
ರ್ಗುತ್ಸಾಹವಪ್ಪಂತೆ ಪೇಳ್ದಿಸುತ್ಸಾಹದಿಂದಂ ॥ ೧ ॥

ಈ ರಗಳೆಯೊಳಿಹುದರುವಿನ ।
ಸಾರಗಳೆಂದರಿದು ಸುಖಿಸಿ ಸಕಲ ಜನರೊಳು ॥
ವೈರಗಳೆಲ್ಲವ ಬಿಡೆ ಭವ ।
ದೂರಗಳೆನಿಸುವುವು ಸಿದ್ಧಲಿಂಗನ ಕೃಪೆಯಿಂ ॥ ೨ ॥

ಇದನೋದಿ ಬರೆದು ಪಠಿಸುತ ।
ಮುದದಿಂದರ್ಥೈಸಿ ಕೇಳೆ, ಭವಬಂಧನಮಂ ॥
ಒದೆದು ನಿಜಮುಕ್ತಿ ರಾಜ್ಯದಿ ।
ಪದುಳದೊಳಿರುತಿಹನು ಗುರು ನಿರಂಜನಲಿಂಗಾ ॥ ೩ ॥

॥ ಸಿದ್ಧೇಶ್ವರ ಪವಾಡದ ರಗಳೆ ಸಮಾಪ್ತ ॥

# ಸಲಹು ಸಿದ್ಧಲಿಂಗೇಶ

— ಗೂಳೂರ ಸಿದ್ಧವೀರಣ್ಣೊಡೆಯರು.

ಶ್ರೀ ವಿಮಲಮುಕ್ತಿದಾಯಕ
ಪಾವನಮಯ ಪರಮಚರಿತ ಷಟ್‌ಸ್ಥಲನಾಯಕ
ಭೂವಿನುತ ಸಚ್ಚಿದಾತ್ಮಕ
ಭಾವಜಹರ ಸಲಹು ಸಿದ್ಧಲಿಂಗ ಸುದೇಶಿಕ.

ಶೂನ್ಯಸಂಪಾದನೆ – ಪ್ರಥಮೋಽಗೇಶ. ಕಂದ ॥ ೧ ॥

# ಸತ್ಫಲಪ್ರದಂ, ಅಕ್ಷರಪರಲಿಂಗಸಂಗಂ

— ಷಡಕ್ಷರದೇವ.

ಶ್ರೀಕರವೀರ ಸಾಧುಸಹಕಾರಸುದಂಚಿತಮುಕ್ತಕಂ ಸುಪ
ದ್ಮಾಕರಸುದ್ಗಮಪ್ರರುಚಿಮಂಜುಲತಾನ್ವಿತಸೂರ್ಜಿತಾಗಮಾ
ನೀಕನುತಂ ಮಹಾವಿರತಿಸಂಯುತನಾದುದಜಿಂದೆ ಸಾರ್ಥನಾ
ಮಾಕರನಾದ ತೋಂಟದ ಗುರೂತ್ತಮನೊರ್ವನೆ ಸತ್ಫಲಪ್ರದಂ*

*

ದುರಿತತಮಃಪತಂಗನಮಳಾರ್ಥವಿವೇಚನ ಸತ್ಪ್ರಸಂಗನೀ
ಶ್ವರಲಸದಂತರಂಗನಭವಾಗಮ ವಾರಿಜದಿವ್ಯಭೃಂಗನ
ಕ್ಷರಪರಲಿಂಗಸಂಗನತಿಶಾಂತಿ ನಿರಸ್ತಜಡಾನುಷಂಗನೊ
ಲ್ದುರುತರ ಸಿದ್ಧಲಿಂಗಯತಿತುಂಗನೊಡರ್ಚುಗೆ ಸಜ್ಜನೇಷ್ಟಮಂ †

---

* ಬಸವರಾಜವಿಜಯಂ : ಪ್ರಥಮಾಶ್ವಾಸಂ ॥ ೧೭ ॥

† ರಾಜಶೇಖರವಿಲಾಸಂ: ಪ್ರಥಮಾಶ್ವಾಸಂ ॥ ೧೪ ॥

# ಮಾಯೆಯನೊದ್ದನ, ಶಿವಸನ್ನದ್ಧನ!

— ಎಳಂದೂರು ಹರೀಶ್ವರ.

ಶುದ್ಧನ ಸೂನೃತಬದ್ಧನ ಮಾಯೆಯ ।
ನೊದ್ದನ ಶಿವಸನ್ನದ್ಧನ ಶಮನನ ।
(ಬು)ದ್ಧನ ಹರಗಣಬುದ್ಧನ ಕುಮತವಿರುದ್ಧನ ಗಡ ಭಯಮಂ ।
ಉದ್ಧರಣನ, ಹಿಮಕೃದ್ಧರ ವಿತತ ಚಿ
ರದ್ದೇಹನ ಗತವೃದ್ಧನ ಸುಕೃತ ಪಿ
ನದ್ಧನ ಭಕ್ತಿಸಮೃದ್ಧನ ತೋಂಟದ ಸಿದ್ಧನ ಸನ್ನುತಿಪೆಂ ॥

ಪ್ರಭುದೇವರ ಪುರಾ: — ೧ – ೧೯

# ಭೂಮಿಗಿಳಿದು....!

— ವಿರೂಪಾಕ್ಷಪಂಡಿತ.

ಧರೆಯೊಳಗೆ ವೀರಶೈವಾಚಾರವಡಗಿತ್ತು ।
ಕರುಣದಿಂ ನೀವೆ ಚಿತ್ತೈಸಿ ಷಟ್ಸ್ಥಲವನು ।
ದ್ಧರಿಸೆಂದು ನಾರದಂ ಬಿನ್ನವಿಸಲೀಶಂ ನಿರಂಜನಗಣೇಶನೊಡನೆ ॥
ವರಗಣೇಶ್ವರರನೇಳ್ನೂರ್ವರಂ ಕೂಡಿಕೊಂ ।
ಡಿರದೆ ಭೂಮಿಯೊಳುದಿಸಿ ಜಂಗಮಸ್ಥಲವಾಂತು ।
ಪರಮಷಟ್ಸ್ಥಲವನುದ್ಧರಿಸೆಂದು ಕಳುಹಲವರೊಡಗೂಡಿ ಭೂಮಿಗಿಳಿದು ॥

ಪರಮಗೋಸಲಚೆನ್ನಬಸವೇಶ್ವರನ ಹಸ್ತ ।
ಸರಸಿರುಹದಿಂದಾ ನಿರಂಜನ ಗಣೇಶ್ವರಂ ।
ಹರುಷದಿಂದೊಗೆದು ಸಿದ್ಧೇಶನಾಮವನಾಂತು ಕಗ್ಗೆರೆಯ ತೋಂಟಕೈದಿ ॥
ಇರದೆ ನಂಬ್ಯಣ್ಣನೆಂಬಾತನತಿಭಕ್ತಿಯಿಂ ।
ಶರಣೆಂದು ಭಿಕ್ಷಕ್ಕೆ ಬಿನ್ನವಿಸಿಕೊಂಡೀಗ ।
ತಿರುಗಿ ಬಂದಾನೆ ಕರೆಕೊಂಡು ಪೋದಪನೆಂದು ಕಗ್ಗೆರೆಗೆ ಪೋಗಲಾಗ ॥

ಜಗಳದಿಂದೂರೊಡೆದು ಪೋಗಿ ಕೆಲದಿವಸಕ್ಕೆ ।
ಮಗುಳೆ ಬರ್ಪನ್ನೆಗಂ ತೋಂಟದೊಳಗೇನುವಂ ।
ಬಗೆಯದೆ ಶಿವಧ್ಯಾನದಿಂದೆ ಪರವಶವ ನೈದಿರೆ ಗೆದ್ದಲೆ ಹುತ್ತವಿಕ್ಕೆ ॥
ಜಗವೆಲ್ಲಮತಿಚೋದ್ಯದಿಂ ನೋಡಿ ಹುತ್ತಮಂ ।
ಬಗಿದು ಕಂಡಾಗ ತೋಂಟದ ಸಿದ್ಧಲಿಂಗನೆಂ ।
ದಗಣಿತಮಹಾಪುರುಷನೆಂದು ಪೂಜಿಸುವರೆಲೆ ರಾಮೇಶ ಕೇಳೆಂದನು ॥

ಅಲ್ಲಲ್ಲಿ ನಾನಾ ಪವಾಡಮಂ ಮೆರೆವುತಿರ ।
ಲಲ್ಲಲ್ಲಿ ಗಣನಾಥರುದಿಸಿ ಚರರೂಪಿನಿಂ ।
ದಲ್ಲಲ್ಲಿ ಪೂಜೆಗೊಳುತೈದಿ ತೋಂಟದ ಯತಿಯು ಸಾರಲತಿಪ್ರೀತಿಯಿಂದೆ ॥
ಮೆಲ್ಲ ಮೆಲ್ಲನೆ ತೋಂಟದಾರ್ಯರಾ ವಿರತರೊಳ್
ಬಲ್ಲ ಬಲ್ಲರೊಳು ತತ್ತ್ವಾನುಭಾವಂಗಳಿಂ ।
ಸೊಲ್ಲು ಸೊಲ್ಲಿಗೆ ಪರಮಷಟ್ಸ್ಥಲವನುಸಿರ್ವರಾ ವಿರತರಾರಾರೆಂದೆನೆ ॥

'ಚೆನ್ನಬಸವಪುರಾಣ' ಸಂಧಿ ೬೩, ಪದ್ಯ ೪೩–೫೦.

ಸಿದ್ಧಲಿಂಗೇಶ್ವರಂ ಕಂಬಳಾದೇವರಾ ।
ಸಿದ್ಧಸಂಜೇಶ್ವರಂ ಚಿನ್ನದೇವರ್ ದೊಡ್ಡ ।
ಸಿದ್ಧಲಿಂಗೇಶ್ವರಂ ಕಂಕಣದ ದೇವರಾ ಲಂಬಕರ್ಣದ ದೇವರು ॥
ಸಿದ್ಧಮಲ್ಲೇಶ್ವರಂ ಗುಮ್ಮಳಾಪುರದ ವರ ।
ಸಿದ್ಧಲಿಂಗೇಶ್ವರಂ ಯೆಡತೊರೆಯ ಪುರದ ಗುರು ।
ಸಿದ್ಧವೀರಣ್ಣೊಡೆಯರೆಸೆವ ಘನಲಿಂಗದೇವರ್ ಚಿಕ್ಕಮಲ್ಲೇಶನು॥

ಮರುಳಸಿದ್ದೇಶ್ವರಂ ಚಂದ್ರಶೇಖರನೆಸೆವ ।
ಸುರಗಿಯಾರ್ಯ್ಯಂ ಶಾಂತಮಲ್ಲಿಕಾರ್ಜುನದೇವ ।
ರಿರದೆ ಬೆಡಗಿನ ಪರ್ವತೇಶ್ವರಂ ಪಟ್ಟಣದ ದೇವರೆಂದಾ ಜಗುನಿಯಾ॥
ಮರುಳದೇವರ್ ಮಳೆಯದೇವರಾ ಬತ್ತಲೆಯ ।
ಲಿರುವ ದೇವರ್ ಸಂಪಗೆಯ ರಾಚವಟ್ಟಿ ದೇ ।
ವರು ಸಪ್ಪಿಯಾರ್ಯನುಪ್ಪಿನಹಳ್ಳಿಯಾರ್ಯನೊಪ್ಪುವ ಶೀಲವಂತಾರ್ಯನು ॥

ಎಸೆವ ಕೊಡಗಿಯ ಹಳ್ಳಿಯಾರ್ಯ್ಯನುಂ ಜೋಲಿಯಾ ।
ಬಸವೇಶ್ವರಂ ರಾಚವಟ್ಟಿ ಕೋರಿಯ ಸಿದ್ಧ ।
ಬಸವೇಶ್ವರಂ ಹಿರಣ್ಯಾರ್ಯ್ಯನಾ ಶಿವಪೂಜೆಯಾರ್ಯ್ಯನೆಂದೆನಿಪ ಬೋಳ ।
ಬಸವೇಶನಂದು ಕಿತ್ತಾವರದೆ ನಿಂದು ರಾ ।
ಜಿಸುವ ಚೆನ್ನಮಲ್ಲೇಶ್ವರಾದಿ ಪರಿಪರಿಯಲ್ಲಿ ।
ಪೆಸರ್ವಡೆದ ವಿರತರೇಳ್ನೂರ್ವರಾ ತೋಂಟದ ಯತೀಶನಂ ಕೂಡಿರ್ಪರು ॥

ಇಂತಿವರ್ ಮೊದಲಾದ ವಿರತರೇಳ್ನೂರ್ವರುಂ ।
ಸಂತತಂಗೂಡಿ ಷಟ್ಸ್ಥಲಮಾರ್ಗಮಂ ಧರೆಯೊ ।
ಳಂತರಿಸದಂತೆ ನೆಲೆಗೊಳಿಸುತ್ತೆ ಪೂಜೆಗೊಳುತಿರದೆ ನಿಜಮುಕ್ತರಹರು ॥



# ಕಳ್ಳರ್ಗೆ ಕಣ್ಗಳಿತ್ತಂ!

— ಸಿದ್ಧನಂಜೇಶ.

ಪರತರ ಸು-ಷಟ್‌ಸ್ಥಲಬ್ರಹ್ಮಸ್ವರೂಪ ನಿಜ
ಶರಣ ಶಾಶ್ವತನನಘನಪ್ರತಿಮ ಘನಮಹಿಮ
ಸುರುಚಿರ ಶಿವಜ್ಞಾನಿ ಕರ್ಮಪಾಶಚ್ಛೇದಿ ಸಂಸಾರದುಃಖಾಪಹಂ।
ದುರಿತ ದಾರಿದ್ರ್ಯತುಲ ಮೇಘ ಝಂಝಾವಾತ
ಸರಸ ಭಕ್ತಿಜ್ಞಾನ ವೈರಾಗ್ಯ ಸಂಪನ್ನ
ಪರಮ ಸದ್‌ಭಕ್ತಾಂತರಂಗ ತೋಂಟದ ಸಿದ್ಧಲಿಂಗ ಕರುಣಾಪಾಂಗನು ॥

ಗುಡಿಯಲಿಂಗದ ಕೈಯ ಭಿಕ್ಷಮಂ ಕೈಕೊಂಡು
ಬಡಗದೇಶದ ಮಾಬಳೇಶಲಿಂಗದ ಶಿರದೊ
ಳಡಿಯಿಟ್ಟು ಜಲವ ಬರಿಸಿದನು ದ್ರಾವಿಡದೊಳಣ್ಣಾಮಲೇಶ್ವರಲಿಂಗದಿ ॥
ಪಡೆದು ಮುತ್ತಿನ ಪಂಚತಾವಡವ ಸತ್ತಿರ್ದ
ಘಟಸರ್ಪಗಸುವಿತ್ತು ಪೊಳಲ್ಗುಂದದಾಶಕ್ತಿ
ಗೊಡನೆ ಕೃಪೆಯಾದ ಪಂಚಕ್ಷೇತ್ರದವಸರವನೊರೆದೊಂದು ಲಗ್ನದಲ್ಲಿ ॥

ಕದ್ದಿಲ್ಲವೆಂದು ಕೈನೆಗಹೆ ತೋಂಟದ ಪರಮ
ಸಿದ್ಧೇಶನಾಣೆಯೆಂದವಳ ಕೈಯ ನಿಲಿಸಿಯಾ
ಕದ್ದ ಮೂಗುತಿಯೀಯೆ ಬಿಟ್ಟುದಾ ಕೈಯಿ ಗೂಳೂರೊಳುಂ ಪ್ರಭುಶೆಟ್ಟಿಯ।
ಮಿದ್ದೆಯೊಳು ದ್ರೋಣಕುಸುಮದ ಮಳೆಯ ಕರೆಸಿದಂ
ಹೊದ್ದಿ ಪದಸೇವೆಗೆಯ್ದಿರ್ದರಡು ಭೂತಗಳನಿರ
ದುದ್ಧರಿಸಿದಂ ಸೆಳೆದುಕೊಂಡು ಕಂಗಾಣದಿಹ ಕಳ್ಳರ್ಗೆ ಕಣ್ಗಳಿತ್ತಂ ॥

ಹೆಬ್ಬೂರ ಭಕ್ತರಡಿಗೆರಗಲಾ ಕೆರೆ ಬಾವಿ
ಯುಬ್ಬಿ ಕಬ್ಬಿಗೆ ನೀರ ಪರಿಸಿದಗ್ಗಳಮಹಿಮ
ನೊಬ್ಬ ಶಿವಭಕ್ತ ತೆಂಗಿನಕಾಯ ಮುಂದಿಡಲು ನೋಡಿಯರ್ಪಿಸಿದೆವೆನಲು।
ಕೊಬ್ಬರಿಯು ಕಾಯವೊಳಗಿಲ್ಲಾಯ್ತು ನೋಡಿದರೆ
ಹೆಬ್ಬೂರೊಳಾ ಕಲ್ಲಬಸವಗೆ ಪ್ರಸಾದಮಂ
ಸಬ್ಬರರಿವೊಲು ಮೆಲಿಸಿದಯ್ಯನಾಣೆಗೆ ಗೂಳಿ ತೃಣವ ಮುಟ್ಟದೆ ನಿಂದುದು ॥

ಶ್ರೀ ಗುರುರಾಜಚಾರಿತ್ರ : ಸಂಧಿ ೧೩ ; ಪದ್ಯಗಳು ೮೭–೯೫.

ಸಿದ್ಧಲಿಂಗೇಶ್ವರಂ ಕಂಬಳಾದೇವರಾ ।
ಸಿದ್ಧನಂಜೇಶ್ವರಂ ಚೆನ್ನದೇವರ್ ದೊಡ್ಡ ।
ಸಿದ್ಧಲಿಂಗೇಶ್ವರಂ ಕಂಕಣದ ದೇವರಾ ಲಂಬಕರ್ಣದ ದೇವರು ॥
ಸಿದ್ಧಮಲ್ಲೇಶ್ವರಂ ಗುಮ್ಮಳಾಪುರದ ವರ ।
ಸಿದ್ಧಲಿಂಗೇಶ್ವರಂ ಯೆಡತೊರೆಯ ಪುರದ ಗುರು ।
ಸಿದ್ಧವೀರಣ್ಣೊಡೆಯರೆಸೆವ ಘನಲಿಂಗದೇವರ್ ಚಿಕ್ಕಮಲ್ಲೇಶನು॥

ಮರುಳಸಿದ್ದೇಶ್ವರಂ ಚಂದ್ರಶೇಖರನೆಸೆವ ।
ಸುರಗಿಯಾರ್ಯರ್ಂ ಶಾಂತಮಲ್ಲಿಕಾರ್ಜುನದೇವ ।
ರಿರದೆ ಬೆಡಗಿನ ಪರ್ವತೇಶ್ವರಂ ಪಟ್ಟಣದ ದೇವರೆಂದಾ ಜಗುನಿಯಾ॥
ಮರುಳದೇವರ್ ಮಳೆಯದೇವರಾ ಬತ್ತಲೆಯ ।
ಲಿರುವ ದೇವರ್ ಸಂಪಗೆಯ ರಾಚವಟ್ಟಿ ದೇ ।
ವರು ಸಪ್ಪಿಯಾರ್ಯನುಪ್ಪಿನಹಳ್ಳಿಯಾರ್ಯನೊಪ್ಪುವ ಶೀಲವಂತಾರ್ಯನು॥

ಎಸೆವ ಕೊಡಗಿಯ ಹಳ್ಳಿಯಾರ್ಯರ್ನುಂ ಜೋಲಿಯಾ ।
ಬಸವೇಶ್ವರಂ ರಾಚವಟ್ಟಿ ಕೋರಿಯ ಸಿದ್ಧ ।
ಬಸವೇಶ್ವರಂ ಹಿರಣ್ಯಾರ್ಯನಾ ಶಿವಪೂಜೆಯಾರ್ಯನೆಂದೆನಿಪ ಬೋಳ ।
ಬಸವೇಶನಂದು ಕಿತ್ತಾವರದೆ ನಿಂದು ರಾ ।
ಜಿಸುವ ಚೆನ್ನಮಲ್ಲೇಶ್ವರಾದಿ ಪರಿಪರಿಯಲ್ಲಿ ।
ಪೆಸರ್ವಡೆದ ವಿರತರೇಳ್ನೂರ್ವರಾ ತೋಂಟದ ಯತೀಶನಂ ಕೂಡಿರ್ಪರು ॥

ಇಂತಿವರ್ ಮೊದಲಾದ ವಿರತರೇಳ್ನೂರ್ವರುಂ ।
ಸಂತತಂಗೂಡಿ ಷಟ್ಸ್ಥಲಮಾರ್ಗಮಂ ಧರೆಯೊ ।
ಳಂತರಿಸದಂತೆ ನೆಲೆಗೊಳಿಸುತ್ತೆ ಪೂಜೆಗೊಳುತಿರದೆ ನಿಜಮುಕ್ತರಹರು॥

# ಕಳ್ಳರ್ಗೆ ಕಣ್ಗಳಿತ್ತಂ!

— ಸಿದ್ಧನಂಜೇಶ.

ಪರತರ ಸು-ಷಟ್‌ಸ್ಥಲಬ್ರಹ್ಮಸ್ವರೂಪ ನಿಜ
ಶರಣ ಶಾಶ್ವತನನಘನಪ್ರತಿಮ ಘನಮಹಿಮ
ಸುರುಚಿರ ಶಿವಜ್ಞಾನಿ ಕರ್ಮಪಾಶಚ್ಛೇದಿ ಸಂಸಾರದುಃಖಾಪಹಂ।
ದುರಿತ ದಾರಿದ್ರ್ಯತುಲ ಮೇಘ ಝಂಝಾವಾತ
ಸರಸ ಭಕ್ತಿಜ್ಞಾನ ವೈರಾಗ್ಯ ಸಂಪನ್ನ
ಪರಮ ಸದ್‌ಭಕ್ತಾಂತರಂಗ ತೋಂಟದ ಸಿದ್ಧಲಿಂಗ ಕರುಣಾಪಾಂಗನು ॥

ಗುಡಿಯಲಿಂಗದ ಕೈಯ ಭಿಕ್ಷಮಂ ಕೈಕೊಂಡು
ಬಡಗದೇಶದ ಮಾಬಳೇಶಲಿಂಗದ ಶಿರದೊ
ಳಡಿಯಿಟ್ಟು ಜಲವ ಬರಿಸಿದನು ದ್ರಾವಿಡದೊಳಣ್ಣಾಮಲೇಶ್ವರಲಿಂಗದಿ ॥
ಪಡೆದು ಮುತ್ತಿನ ಪಂಚತಾವಡವ ಸತ್ತಿರ್ದ
ಘಟಸರ್ಪಗಸುವಿತ್ತು ಪೊಳಲ್ಗುಂದದಾಶಕ್ತಿ
ಗೊಡನೆ ಕೃಪೆಯಾದ ಪಂಚಕ್ಷೇತ್ರದವಸರವನೊರೆದೊಂದು ಲಗ್ನದಲ್ಲಿ ॥

ಕದ್ದಿಲ್ಲವೆಂದು ಕೈನೆಗಹೆ ತೋಂಟದ ಪರಮ
ಸಿದ್ಧೇಶನಾಣೆಯೆಂದಳ ಕೈಯ ನಿಲಿಸಿಯಾ
ಕದ್ದ ಮೂಗುತಿಯೀಯೆ ಬಿಟ್ಟುದಾ ಕೈಯಿ ಗೂಳೂರೊಳುಂ ಪ್ರಭುಶೆಟ್ಟಿಯ ।
ಮಿದ್ದೆಯೊಳು ದ್ರೋಣಕುಸುಮದ ಮಳೆಯ ಕರೆಸಿದಂ
ಹೊದ್ದಿ ಪದಸೇವೆಗೆಯ್ದೆರಡು ಭೂತಗಳನಿರ
ದುದ್ಧರಿಸಿದಂ ಸೆಳೆದುಕೊಂಡು ಕಂಗಾಣದಿಹ ಕಳ್ಳರ್ಗೆ ಕಣ್ಗಳಿತ್ತಂ ॥

ಹೆಬ್ಬೂರ ಭಕ್ತರಡಿಗೆರಗಲಾ ಕೆರೆ ಬಾವಿ
ಯುಬ್ಬಿ ಕಬ್ಬಿಗೆ ನೀರ ಪರಿಸಿದಗ್ಗಳಮಹಿಮ
ನೊಬ್ಬ ಶಿವಭಕ್ತ ತೆಂಗಿನಕಾಯ ಮುಂದಿಡಲು ನೋಡಿಯರ್ಪಿಸಿದವೆನಲು ।
ಕೊಬ್ಬರಿಯು ಕಾಯಾವೊಳಗಿಲ್ಲಾಯ್ತು ನೋಡಿದರೆ
ಹೆಬ್ಬೂರೊಳಾ ಕಲ್ಲಬಸವಗೆ ಪ್ರಸಾದಮಂ
ಸಬ್ಬರರಿವೊಲು ಮೆಲಿಸಿದಯ್ಯನಾಣೆಗೆ ಗೂಳಿ ತೃಣವ ಮುಟ್ಟದೆ ನಿಂದುದು ॥

ಶ್ರೀ ಗುರುರಾಜಚಾರಿತ್ರ : ಸಂಧಿ ೧೩ ; ಪದ್ಯಗಳು ೮೭–೯೩.

ಂಗೇಶ್ವರಂ ಕಂಬಳಾದೇವರಾ ।
ಜೇಶ್ವರಂ ಚೆನ್ನದೇವರ್ ದೊಡ್ಡ ।
ಂಗೇಶ್ವರಂ ಕಂಕಣದ ದೇವರಾ ಲಂಬಕರ್ಣದ ದೇವರು ॥
ಂಲ್ಲೇಶ್ವರಂ ಗುಮ್ಮಳಾಪುರದ ವರ ।
ಂಗೇಶ್ವರಂ ಯೆಡತೊರೆಯ ಪುರದ ಗುರು ।
ರಣ್ಣೊಡೆಯರೆಸೆವ ಘನಲಿಂಗದೇವರ್ ಚಿಕ್ಕಮಲ್ಲೇಶನು॥

ಮರುಳಸಿದ್ದೇಶ್ವರಂ ಚಂದ್ರಶೇಖರನೆಸೆವ ।
ಸುರಗಿಯಾರ್ಯ೦ ಶಾಂತಮಲ್ಲಿಕಾರ್ಜುನದೇವ ।
ರಿರದೆ ಬೆಡಗಿನ ಪರ್ವತೇಶ್ವರಂ ಪಟ್ಟಣದ ದೇವರೆಂದಾ ಜಗುನಿಯಾ ॥
ಮರುಳದೇವರ್ ಮಳೆಯದೇವರಾ ಬತ್ತಲೆಯ ।
ಲಿರುವ ದೇವರ್ ಸಂಪಗೆಯ ರಾಚವಟ್ಟಿ ದೇ ।
ವರು ಸಪ್ಪಿಯಾರ್ಯಸುಪ್ಪಿನಹಳ್ಳಿಯಾರ್ಯನೊಪ್ಪುವ ಶೀಲವಂತಾರ್ಯನು ॥

ಕೊಡಗಿಯ ಹಳ್ಳಿಯಾರ್ಯನುಂ ಜೋಲಿಯಾ ।
ಶ್ವರಂ ರಾಚವಟ್ಟಿ ಕೋರಿಯ ಸಿದ್ಧ ।
ಶ್ವರಂ ಹಿರಣ್ಯಾರ್ಯನಾ ಶಿವಪೂಜೆಯಾರ್ಯನೆಂದೆನಿಪ ಬೋಳ ।
ಶನಂದು ಕಿತ್ತಾವರದೆ ನಿಂದು ರಾ ।
ಚೆನ್ನಮಲ್ಲೇಶ್ವರಾದಿ ಪರಿಪರಿಯಲ್ಲಿ ।
ಡೆದ ವಿರತರೇಳ್ನೂರ್ವರಾ ತೋಂಟದ ಯತೀಶನಂ ಕೂಡಿರ್ಪರು ॥

ಇಂತಿವರ್ ಮೊದಲಾದ ವಿರತರೇಳ್ನೂರ್ವರುಂ ।
ಸಂತತಂಗೂಡಿ ಷಟ್ಸ್ಥಲಮಾರ್ಗಮಂ ಧರೆಯೊ ।
ಳಂತರಿಸದಂತೆ ನೆಲೆಗೊಳಿಸುತ್ತೆ ಪೂಜೆಗೊಳುತಿರದೆ ನಿಜಮುಕ್ತರಹರು ॥



# ಕಳ್ಳರ್ಗೆ ಕಣ್ಗಳಿತ್ತಂ!

— ಸಿದ್ಧನಂಜೇಶ.

ಪರತರ ಸು-ಷಟ್‌ಸ್ಥಲಬ್ರಹ್ಮಸ್ವರೂಪ ನಿಜ
ಶರಣ ಶಾಶ್ವತನನಘನಪ್ರತಿಮ ಘನಮಹಿಮ
ಸುರುಚಿರ ಶಿವಜ್ಞಾನಿ ಕರ್ಮಪಾಶಚ್ಛೇದಿ ಸಂಸಾರದುಃಖಾಪಹಂ ।
ದುರಿತ ದಾರಿದ್ರ್ಯತುಲ ಮೇಘ ಝಂಝಾವಾತ
ಸರಸ ಭಕ್ತಿಜ್ಞಾನ ವೈರಾಗ್ಯ ಸಂಪನ್ನ
ಪರಮ ಸದ್‌ಭಕ್ತಾಂತರಂಗ ತೋಂಟದ ಸಿದ್ಧಲಿಂಗ ಕರುಣಾಪಾಂಗನು ॥

ಗುಡಿಯಲಿಂಗದ ಕೈಯ ಭಿಕ್ಷಮಂ ಕೈಕೊಂಡು
ಬಡಗದೇಶದ ಮಾಬಳೇಶಲಿಂಗದ ಶಿರದೊ
ಳಡಿಯಿಟ್ಟು ಜಲವ ಬರಿಸಿದನು ದ್ರಾವಿಡದೊಳಣ್ಣಾಮಲೇಶ್ವರಲಿಂಗದಿ ॥
ಪಡೆದು ಮುತ್ತಿನ ಪಂಚತಾವಡವ ಸತ್ತಿರ್ದ
ಘಟಸರ್ಪಗಸುವಿತ್ತು ಪೊಳಲ್ಗುಂದದಾಶಕ್ತಿ
ಗೊಡನೆ ಕೃಪೆಯಾದ ಪಂಚಕ್ಷೇತ್ರದವಸರವನೊರೆದೊಂದು ಲಗ್ನದಲ್ಲಿ ॥

ಕದ್ದಿಲ್ಲವೆಂದು ಕೈನೆಗಹೆ ತೋಂಟದ ಪರಮ
ಸಿದ್ಧೇಶನಾಣೆಯಿಂದಳ ಕೈಯ ನಿಲಿಸಿಯಾ
ಕದ್ದ ಮೂಗುತಿಯೀಯೆ ಬಿಟ್ಟುದಾ ಕೈಯಿ ಗೂಳೂರೊಳುಂ ಪ್ರಭುಶೆಟ್ಟಿಯ ।
ಮಿದ್ದೆಯೊಳು ದ್ರೋಣಕುಸುಮದ ಮಳೆಯ ಕರೆಸಿದಂ
ಹೊದ್ದಿ ಪದಸೇವೆಗೆಯ್ದಿರಡು ಭೂತಗಳನಿರ
ದುದ್ಧರಿಸಿದಂ ಸೆಳೆದುಕೊಂಡು ಕಂಗಾಣದಿಹ ಕಳ್ಳರ್ಗೆ ಕಣ್ಗಳಿತ್ತಂ ॥

ಹೆಬ್ಬೂರ ಭಕ್ತರಡಿಗೆರಗಲಾ ಕೆರೆ ಬಾವಿ
ಯುಬ್ಬಿ ಕಬ್ಬಿಗೆ ನೀರ ಪರಿಸಿದಗ್ಗಳಮಹಿಮ
ನೊಬ್ಬ ಶಿವಭಕ್ತ ತೆಂಗಿನಕಾಯ ಮುಂದಿಡಲು ನೋಡಿಯರ್ಪಿಸಿದೆವೆನಲು ।
ಕೊಬ್ಬರಿಯು ಕಾಯವೊಳಗಿಲ್ಲಾಯ್ತು ನೋಡಿದರೆ
ಹೆಬ್ಬೂರೊಳಾ ಕಲ್ಲಬಸವಗೆ ಪ್ರಸಾದಮಂ
ಸಬ್ಬರರಿವೊಲು ಮೆಲಿಸಿದಯ್ಯನಾಣೆಗೆ ಗೂಳಿ ತೃಣವ ಮುಟ್ಟದೆ ನಿಂದುದು ॥

ಶ್ರೀ ಗುರುರಾಜಚಾರಿತ್ರ : ಸಂಧಿ ೧೩ ; ಪದ್ಯಗಳು ೮೭–೯೩.

ಂಡೊಡ್ಡರನ್ನವಮಾಡಿ ಸಿದ್ಧೇಶ
ಲಿಸೆನಲನ್ನಮಂ ಬಯಲಮಾಡಿದಂ
ಚ್ಚಳಿದ ನರಗಿತ್ತನಾ ಪ್ರಾಣಮಂ ಜಂಬುನೇರಿಲವೃಕ್ಷವು ।
ಪಣ್ಗಳಿತ್ತುದು ಮುದ್ರಿಸಿದ ಗುಡಿಯು
ಕದ ತೆಗೆದುದುಂ ನಡುಗೆರೆಗೆ ಪೋದ ಕೊಡ
ಯ್ಯನಾಣೆಗಂ ಬಂದುದಾ ವೊಂಬತ್ತುಕೊಳಗ ಗೋಕ್ಷೀರಗಳನು ॥

ರದೊಳುಂಡಂ ಪಾದಜಲ ಧರೆಯೊಳುಂ ಬೀಳೆ
ಕೆರಲಿಂಗವಾಗಿ ಪಾಲಿಸಿದ ಪುಷ್ಪಕ ಮುರಿವು
ರಲಯ್ಯನಾಣೆಗಂ ನಿಂದುದಾ ವೀರಯ್ಯಗಿತ್ತ ಕನ್ನಡಭಾಷೆಯ ।
ರಳಾಕ್ಷಿ ಸುಪ್ರಸಾದದ ಪ್ರಸೂನಮನೊಲ್ಲ
ರಲು ಲಿಂಗವ ಬಯಲಮಾಡಿದಂ ವೋಲೆಯುಣ್ಣ
ರೆ ತನ್ನ ಹೆಸರಿಡಿಸಿಕೊಂಡು ಶಿಶುವಿಂಗಾಕ್ಷಣವೆ ವೋಲೆಯನುಣಿಸಿ ಮೆರೆದಂ॥

ಗುರುಡಂಗೊಲಿದು ಲಿಂಗಸ್ವರೂಪದಿಂ
ರಕ್ಷಿಸಿದನಾ ಮನೆಯ ದಿಕ್ಕಿಗೆ ಬಾಳೆ
ರಲಯ್ಯನಾಣೆಗೆ ಮುಖಂದಿರುಗಿದುದು ನೆಲ್ಲ ಕುದಿಸುವ ಹರವಿಯು ॥
ಡೆವೃತ್ತಿರಲಯ್ಯನಾಣೆಗೆ ಬಲಿದು
ಾದುದು ಬಸವನಾಜ್ಞೆಯಾ ಸಂದಿಯೊಳು
ಕ್ಷಿಸಿದನಾ ಮಳೆಯಿಲ್ಲದಿರೆ ಮಳೆಯ ಕರೆಸಿದಂ ಸಿದ್ಧೇಶನು ॥

ಕನಸಿನಲ್ಲೊರೆದು ಗಂಗಾಳಮಂ ಕೊಡಿಸಿದಂ
ಘನಕುಸುಮಮಂ ಬೆಟ್ಟದಾವರೆಯ ಮರ ನಮಿಸಿ
ವಿನಯದಿಂದಿತ್ತುದುಂ ನೀದಿಸಿದ ದಾಸಂಗೆ ಸ್ವಪ್ನದಲ್ಲುದುರ್ದ ಪಲ್ಲ ।
ಜನ ವಿನುತಿಸಲ್ ಕೊಟ್ಟ ಶಾಂತಯ್ಯಗಳು ನುತಿಸೆ
ಮನದಿಷ್ಟವಿತ್ತನೆಂದೆಲ್ಲ ಜನ ಪೊಗಳುತಿರೆ
ಅನಘನಪ್ರತಿಮ ತೋಂಟದ ಸಿದ್ಧಲಿಂಗದೇಶಿಕ ಮೆರೆದನೀ ಧರೆಯೊಳು ॥

ಹೊಡಗೆಡೆದು ಪರ್ವಗಳ ಮಾಡಲ್ಕ
ಹಿಮಾಭರಣನುರ್ವಿ ಕೊಂಡಾಡುತಿರೆ
ಭೀಷ್ಮಗಳ ನಿರ್ವಿಘ್ನದಿಂದಿತ್ತು ಸರ್ವೇಶನಾಗಮದೊಳು ।
ಗೆ ಪೇಳ್ದಂತಪೂರ್ವ ಸುಸಮಾಧಿಯೊಳು
ರುಫೆ ಎನಲು ನಿರ್ವಯಲನೆಯ್ದಿದಂ
ಸಿದ್ಧೇಶ ನಿರ್ವಾಣಪದದಾಯಿಯೆಂದನಾ ಗುರುರಾಯನು ॥

# ತೋಂಟದ ರಾಯ

— ಬಸವಲಿಂಗಕವಿ.

ಶರಣಜನಪರಿಭವಲತಾಳಿಯಂ ಕೀಳ್ತು ದು ।
ಷ್ಕರ ಕುಜನಕುಜವಿತಾನಂಗಳಂ ತರಿದು ದು-
ಸ್ತರ ದುರಾಶಾವಾರಿಭರಿತ ಕಾಸಾರಮಂ ಕೆಡಿಸಿಯುನ್ನತ ಫಲಂಗಳಂ ।
ಕರಮೆ ನಾಶಂಗೆಯ್ದು ವಿಷಯಕುಸುಮಂಗಳಂ –
ಕುರಿಸದಂತೆಸಗಿ ತೋಂಟದ ರಾಯನೆನಿಸಿದ –
ಚ್ಚರಿಯಚರಿತಂ ಸಿದ್ಧಲಿಂಗೇಶನೆಮಗೀಗೆ ಸುರುಚಿರೇಷ್ಟಾರ್ಥಫಲಮಂ ॥

ಕೊಟ್ಟೂರು ಬಸವೇಶ್ವರ ಚಾರಿತ್ರ : ೧–೨೮.

# ಪರಮಾನಂದ ನಂದನ

ವರದ ಪರಪುರುಷಾರ್ಥ ಫಲ ವಿ ।
ಸ್ತರ ಸುವಿತ್ತುಮನೋನುವಾಸನ ।
ವಿರತ ಹಂಸನಿಯುಕ್ತ ಸಾರಸ ರಸಿಕ ಸುರಭೂಜ ॥
ಚಿರವಸಂತ ಸಖಾಹಿತಾಮರ ।
ಭರಿತ ಪರಮಾನಂದ ನಂದನ ।
ನಿರುತ ತೋಂಟದ ಸಿದ್ಧಲಿಂಗ ಚಿದಂಗ ರಕ್ಷಿಪುದು ॥

~~~~~~~~

— ಪಂಚಾಶಿಕೆ
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.
ಓಲೆಪ್ರತಿ. ಗರಿ : ೧೨೧, ೧–೩
~~~~~~~~

# ಭಕ್ತಜನ ಕಲ್ಪಭೂಜ

— ಮಾಗಡಿ ವೀರಪ್ಪಶಾಸ್ತ್ರಿಗಳು.

ಶ್ರೀ ಪರಮಚಿಜ್ಜ್ಯೋತಿರೂಪನೆನಿಸುವ ಪಾರ್ವ
ತೀಪತಿಯ ಹೃದಯದಲಿ ತೊಳಗುವ ಚಿದಾನಂದ
ರೂಪ ಬಸವೇಶ್ವರನ ಹೃತ್ಕಮಲದಲಿ ನಿಂದು ಲೋಕಮಂ ಪಾಲಿಸಲ್ಕೆ।
ದ್ವಾಪರ ತ್ರೈತ ಕೃತಯುಗಗಳೊಳವತರಿಸಿ
ಪಾಪಮಂ ಕಳೆದು ನಿಜಪಾದಪದ್ಮಾನತರಿ
ಗಾಪರಮ ಸತ್ಕಳೆಯ ತೋರಿ ಮೆರೆದೈ ಯತಿಪ ಗುರುಸಿದ್ಧಲಿಂಗೇಶ್ವರ॥

ಎನ್ನ ಮನವೆಡೆಬಿಡದೆ ನಿನ್ನ ಚರಣದೊಳಿರಲಿ
ಎನ್ನ ವಚನವು ನುತಿಯ ಮಾಳ್ಪುದರೊಳಿರುತಿರಲಿ
ಎನ್ನ ಕರಮರ್ಚನೆಯನೆಸಗುವುದನಿಚ್ಛಿಸಲಿ ಭಕ್ತಜನಕಲ್ಪಭೂಜ।
ಎನ್ನ ಕರ್ಣವು ಕಥಾಕರ್ಣನದಿ ಮೋದಿಸಲಿ
ಎನ್ನ ಬುದ್ಧಿಯು ಭವದ್ಧ್ಯಾನವನು ಕಾಂಕ್ಷಿಸಲಿ
ಎನ್ನ ನೇತ್ರವು ಮೂರ್ತಿ ಸತ್ಪ್ರಭೆಯನೀಕ್ಷಿಸಲಿ ಗುರುಸಿದ್ಧಲಿಂಗೇಶ್ವರ॥

ಗುರುವಿನಡಿದಾವರೆಯ ಪರಿಚರ್ಯೆಯಂ ಮಾಡು
ತಿರಲೊಂದು ದಿನ ದೀಪದೊಳು ತೈಲವಿಲ್ಲದಿರೆ
ಹರುಷದಿಂ ನೀರೆರೆದು ದಿವ್ಯಕಾಂತಿಯನೆಸಗಿ ತದ್ಗುರುವಿಗತಿಮೋದಮಂ।
ನೆರಪಿ ಲೋಕದಿ ಮಹತ್ವನಿಧಿಯೆಂದೆನಿಪ ಘನ
ಬಿರುದನವಧರಿಸಿ ಭುವನಾಳಿಯಂ ರಕ್ಷಿಸುತೆ
ಮೆರೆದೆ ಸತ್ಕರುಣಾಮೃತಾಬ್ಧಿ ಪೀಯೂಷಕರ ಗುರುಸಿದ್ಧಲಿಂಗೇಶ್ವರ॥

ಸಿದ್ಧಲಿಂಗೇಶ್ವರ ಶತಕ. ಆಯ್ದ ಪದ್ಯಗಳ ಸಂಖ್ಯೆ : ೨, ೮, ೧೦, ೧೫, ೨೦, ೧೦೦.

ಪರಮಂಕಗ್ಗೆರೆಯ ಪೂದೋಟದೊಳು ತಾಂ ತಪವ
ವಿರಚಿಸುತೆ ಕುಳಿತಿರಲು ತನ್ನ ಸುತ್ತಂ ಪುತ್ತು
ಪರಿವೇಷ್ಟಿಸಿರಲದರ ಮೇಲೊಂದು ಧೇನು ಪಾಲ್ಗರೆವುತಿರೆ ತನ್ನ ಮನವ।
ಪರಮನೊಳಗೈಕ್ಯಾನುಸಂಧಾನದಿಂ ನಿಲಿಸಿ
ಗುರುತೋಂಟದಾರ್ಯನಿವನೆಂಬ ನಾಮವನಾಂತು
ಮೆರೆವುತ್ತ ನಂಬ್ಯಣ್ಣನತಿಭಕ್ತಿಗೊಲಿದೆಯ್ಯ ಗುರುಸಿದ್ಧಲಿಂಗೇಶ್ವರ॥

ಯೋಗೀಶ ನೀನಾಗಿ ಪರಮಶೈವಾನುಭವ
ಭೋಗಕೊಡಲಂಗೊಟ್ಟು ದುರಿತಹರಲಿಂಗಾನು
ರಾಗಿಯೆನಿಪ ಸುನಾಮವಾಂತು ವಸುಧಾತಲದೆ ಸರ್ವಸಂಪೂಜ್ಯನೆನಿಸಿ।
ಯೋಗದಮಲರಹಸ್ಯಮಂ ತಿಳಿಪಿ ಲಿಂಗಾಂಗ
ಯೋಗದೋಳ್ನಲಿವುತ್ತೆ ಭಕ್ತಸಂತತಿಗೆ ಭವ
ರೋಗವೈದ್ಯಕನಾಗಿ ಮೆರೆದೆಯ್ಯ ಮುದದಿಂದೆ ಗುರುಸಿದ್ಧಲಿಂಗೇಶ್ವರ॥

ಮಂಗಲಂ ಶೈವಲೀಲಾರತ್ನಮುಕುರನಿಗೆ
ಮಂಗಲಂ ನಿಜಭಕ್ತನಿಹಿತಾನುಕಂಪನಿಗೆ
ಮಂಗಲಂ ಮುಕ್ತ್ಯಂಗನಾಪ್ರಾಣವಲ್ಲಭಗೆ ಮಂಗಲಂ ಜಯಶೀಲಗೆ ।
ಮಂಗಲಂ ವರವೀರಶೈವಾಬ್ಧಿ ಚಂದ್ರನಿಗೆ
ಮಂಗಲಂ ಸತ್ಪ್ರಮಥ ಕುಲವನವಸಂತನಿಗೆ
ಮಂಗಲಂ ಘನಷಟ್ಸ್ಥಲಾಚಾರ್ಯವರ್ಯನಿಗೆ ಗುರುಸಿದ್ಧಲಿಂಗೇಶಗೆ॥



# ನೀನೆ ಸಿದ್ಧ, ನೀನೆ ಲಿಂಗ!

— ಡಾ|| ಜ. ಚ. ನಿ.

ಸಿದ್ಧಲಿಂಗ ಭವಭಯಭಂಗ
ಶುದ್ಧ ಸಿದ್ಧ ಪ್ರಸಿದ್ಧ ಪವಿತ್ರಾಂತರಂಗ
ನಿನ್ನ ನಾಮವೆ ನಿನಗೆ ನಿಜರೂಪು, ನಿಜಕ್ರಿಯೆ
ನಿನ್ನಿಂದ ನಡೆಯಿತು ಮಾನವೋದ್ಧಾರ ಪ್ರಕ್ರಿಯೆ!

ನೀನು ಕ್ರಿಯಾಚಾರ ಸಿದ್ಧ, ಕ್ರಿಯಾನುಷ್ಠಾನ ಪ್ರಸಿದ್ಧ
ನೀನೇ ಸಮಾಜಪುರುಷನ ಕರಸ್ಥಲ ಕ್ರಿಯಾಲಿಂಗ,
ಕಂಡು ನಲಿವ ಕಳಾಲಿಂಗ!

ನೀನು ಜ್ಞಾನಾಚಾರ ಸಿದ್ಧ, ಜ್ಞಾನ ಪ್ರಚಾರ ಪ್ರಬುದ್ಧ;
ನೀನೇ ಜಿಜ್ಞಾಸು ಜನ ಮನಸ್ಥಲ ಪ್ರಾಣಲಿಂಗ;
ನೆನೆದು ನೆರೆವ ಚಿಲ್ಲಿಂಗ!

ನೀನು ಭಾವಾಚಾರಸಿದ್ಧ, ಭಾವಾನುಭಾವ ಪ್ರವೃದ್ಧ;
ನೀನೇ ಭಾವುಕ ಜನರ ಭಾವಸ್ಥಲ ಭಾವಲಿಂಗ;
ಭಾವೋನ್ನತಾನಂದಲಿಂಗ!

# ಒರೆದೊರೆದು ತೋರಿದ ಕಾರಣ

— ಗುಮ್ಮಳಾಪುರದ ಸಿದ್ಧಲಿಂಗದೇವರು.

ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದು ಎನ್ನಂತರಂಗ ಬಹಿರಂಗ ಶುದ್ಧಾತ್ಮನ ಮಾಡಿದ ಮಡಿವಾಳಯ್ಯ. ಸಾಕಾರ ಮೂರು ಮೂರು ಹದಿನೆಂಟುಪ್ರಕಾರವನೊಳಕೊಂಡು ಎನ್ನ ಬಹಿರಂಗದಲ್ಲಿ ಆಯತವಾದನಯ್ಯ ಬಸವಣ್ಣ. ಎನ್ನ ನಿರಾಕಾರ ಮೂರು ಮೂರು ಹದಿನೆಂಟು ಪ್ರಕಾರವನೊಳಕೊಂಡು ಎನ್ನಂತರಂಗದಲ್ಲಿ ಸ್ವಾಯತವಾದನಯ್ಯ ಚೆನ್ನಬಸವಣ್ಣ. ನಿರಾಳ ನಿರ್ಮಾಯ ನಿಶ್ಶೂನ್ಯ ಬ್ರಹ್ಮವೇ ಉಭಯಸಂಗದಲ್ಲಿ ಸನ್ನಿಹಿತವಾದನಯ್ಯ ಪ್ರಭುದೇವರು. ಇಂತೀ ಅಂತರಂಗ ಬಹಿರಂಗ ಆತ್ಮಸಂಗವನಱುಹಿ ಬೋಳಬಸವೇಶ್ವರನು ಸಿದ್ಧೇಶ್ವರ ನಿಜಪದವನೊರೆದೊರೆದು ತೋರಿದ ಕಾರಣ ಎನ್ನ ತನು ಬಯಲಾಯಿತ್ತು, ಮನ ಬಯಲಾಯಿತ್ತು, ಪ್ರಾಣ ಬಯಲಾಯಿತ್ತು, ಇಂದ್ರಿಯ ಬಯಲಾಯಿತ್ತು, ವಿಷಯ ಬಯಲಾಯಿತ್ತು, ಇಂತಿವರೊಳಗೆ ನಾನು ಬಯಲಾದೆನು. ಪರಂಜ್ಯೋತಿ ಮಹಾಲಿಂಗ ಗುರುಸಿದ್ಧಲಿಂಗ ಪ್ರಭುವಿನಲ್ಲಿ ಹಿಂದು – ಮುಂದು, ಎಡ – ಬಲ, ಅಡಿ – ಆಕಾಶವೆಂಬ ಭೇದವನರಿಯದೆ ಮುಳುಗಿ 'ನಿಶ್ಶಬ್ದಂ ಬ್ರಹ್ಮಮುಚ್ಯತೇ' ಎಂಬ ನುಡಿ ಅಡಗಿತ್ತಯ್ಯಾ ನಿಮ್ಮ ಧರ್ಮ, ನಿಮ್ಮ ಧರ್ಮ.

ಷಟ್ಸ್ಥಲ ಲಿಂಗಾಂಗ ಸಂಬಂಧದ ಸರ್ವವಚನ. ವಚನ ಸಂಖ್ಯೆ ॥ ೩ ॥
ಕನ್ನಡ ಅಧ್ಯಯನ ಸಂಸ್ಥೆಯ ಓಲೆ ಪ್ರತಿ ನಂ: K 498.

# ಪರಮಾರಾಧ್ಯ

— ಘನಲಿಂಗಿದೇವ.

ಎಲೆ ತಂಗಿ, ಶರಣಸತಿ ಲಿಂಗಪತಿಯಾದ ಪತಿವ್ರತಾಭಾವದ ಚಿನ್ಹೆ ನಿನ್ನ ನಡೆ-ನುಡಿಯಲ್ಲಿ ಹೊಗರುದೋರುತ್ತಿದೆ. ನಿನ್ನ ಪೂರ್ವಾಪರವಾವುದಮ್ಮ ? ಸುತ್ತೂರು ಸಿಂಹಾಸನದ ಪರ್ವತದೇವರ ಶಿಷ್ಯರು ಭಂಡಾರಿ ಬಸವಪ್ಪೊಡೆಯದೇವರು, ಆ ಭಂಡಾರಿ ಬಸವಪ್ಪೊಡೆಯದೇವರ ಶಿಷ್ಯರು ಕೂಗಲೂರು ನಂಜಯ್ಯದೇವರು, ಆ ನಂಜಯ್ಯದೇವರ ಕರಕಮಲದಲ್ಲಿ ಉದಯವಾದ ಶರಣವೆಣ್ಣಯ್ಯ ನಾನು. ಎನ್ನ ಗುರುವಿನ ಗುರು ಪರಮಗುರು ಪರಮಾರಾಧ್ಯ ತೋಂಟದಾರ್ಯನಿಗೆ ಗುರುಭಕ್ತಿಯಿಂದ ಎನ್ನ ಶರಣು ಮಾಡಿದರು. ಆ ತೋಂಟದಾರ್ಯನು ತನ್ನ ಕೃಪೆ ಎಂಬ ತೊಟ್ಟಿಲೊಳಗೆನ್ನ ಮಲಗಿಸಿ, ಪ್ರಮಥಗಣಂಗಳ ವಚನಸ್ವರೂಪಾರ್ಥವೆಂಬ ಹಾಲು-ತುಪ್ಪಮಂ ಸದಾ ದಣಿಯಲೆರೆದು, ಅಕ್ಕರಿಂದ ರಕ್ಷಣೆಯಂ ಮಾಡಿ, 'ಘನಲಿಂಗಿ' ಯೆಂಬ ನಾಮಕರಣಮಂ ಕೊಟ್ಟು, ಪ್ರಾಯಸಮರ್ಥೆಯಂ ಮಾಡಿ ಸತ್ಯ ಸದಾಚಾರ ಜ್ಞಾನ-ಕ್ರಿಯೆಗಳೆಂಬ ದಿವ್ಯಾಭರಣಂಗಳಂ ತೊಡಿಸಿ ಅರುಹೆಂಬ ಬಣ್ಣವ ನಿರಿವಿಡಿದುಡಿಸಿ, ಆರ್ತಿಯ ಮಾಡುತಿಪ್ಪ ಸಮಯದಲ್ಲಿ ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು ಬೇಡಿ ಕಳುಹಲು ಎಮ್ಮವರು ಅವರಿಂಗೆ ಮಾತನಿಕ್ಕಿದರಮ್ಮಾ !

— ಘನಲಿಂಗಿದೇವರ ವಚನ ॥ ೧೧ ॥
ಶರಣಸಾಹಿತ್ಯ ಗ್ರಂಥಮಾಲೆ-೬. [೧೯೫೦]

# ಎಲ್ಲಿರುವೆ ತಂದೆ ?

— ಶ್ರೀ ತಾಳಕೇರಿ ಬಸವರಾಜ ಗವಾಯಿ.

ಎಲ್ಲಿರುವೆ ತಂದೆ ನಿನ್ನ ದರುಶನಕಾಗಿ ನಾ ಓಡಿ ಬಂದೆ
ಸಿದ್ಧಲಿಂಗ ಪ್ರಭುವೆ ಎದ್ದು ಬಾ ಗುರುವೆ
ಎಡೆಯೂರ ಪುರವೆ ಇದು ನಿನ್ನ ಠಾವೇ ॥

ಹೆತ್ತ ತಾಯಿ ನೀನೆ, ಹೊತ್ತ ತಂದೆ ನೀನೆ
ಮತ್ತೆ ಮತ್ತೆ ಪೊರೆವ ಮಹಾದೇವ ನೀನೆ ।
ಉತ್ತಮೋತ್ತಮ ಸದ್ಗುರು ನೀನೆ
ನಿತ್ಯ ನಿರಂಜನ ನಿರ್ಮಲಾತ್ಮ ನೀನೇ ॥

ಪ್ರಣವಮಂತ್ರ ನೀನೆ, ಪ್ರಣೀತಶಾಸ್ತ್ರ ನೀನೆ
ಪ್ರಣವನಾದದ ಮೂಲರೂಪ ನೀನೆ ।
ವಿನುತ ವಿರಕ್ತಿಯ ಬಂಧುರ ನೀನೆ
ಮಣಿದು ಬೇಡುವರಿಗೆ ಕಾಮಧೇನು ನೀನೆ ॥

ಲಿಂಗಭೋಗಿ ನೀನೆ, ಮಂಗಲಾತ್ಮ ನೀನೆ
ಜಂಗಮ ನಾಯಕ 'ಜಗದ್ಗುರು' ನೀನೆ ।
ತುಂಗಮಹಿಮ ಶ್ರೀ ಶಿವಯೋಗಿ ನೀನೆ
ಮಂಗಲದಾತ 'ಬಸವ' ಕಲ್ಪತರು ನೀನೆ ॥

ಕೃತಿ : ಶ್ರೀ ಎಡೆಯೂರ ಸಿದ್ಧಲಿಂಗೇಶ್ವರ ಪ್ರಾರ್ಥನೆ.
ಪ್ರ : ಶ್ರೀ ಅಂದಾನಪ್ಪ ಸಿದ್ಧಲಿಂಗಪ್ಪಮಾನ್ವಿ (ಬ್ರದರ್ಸ್) ಗದಗ. ಪುಟ ೩.

# ಜಯತು ಜಡೆಸಿದ್ಧೇಶ

ಕೊಡು ಎನಗೆ ವರವ ಕೊಂಡಾಡುವೆನು ಸದ್ಗುರುವೆ
ಎಡೆಯೂರು ಪುರವಾಸ ಯತಿ ತೋಂಟದೀಶ

ಕರ್ತೃ ಕೈಲಾಸದಿಂದಿಳಿದು ಕಗ್ಗೆರೆಯ ಶಿವ-
ಭಕ್ತ ಬಿನ್ನಹ ಮಾಡೆ ಕೈಗೊಂಡು ನೋಡಿ
ಹತ್ತು ಹನ್ನೆರಡಬ್ಧ ಹುತ್ತದೊಳಗಿದ್ದಾತ
ಸುತ್ತಲೈವತ್ತಾರು ದೇಶಬಲ್ಲಂಥ

ಕಪಿಲ ವರ್ಣದ ಗೋವು ಕರೆದು ನೀಡಿದ ಠಾವು
ವಿಪರೀತಮಯ ಹಾವು ವಿನಯದಲಿ ನೀವು
ಜಪವ ಮಾಡುತಲಿರ್ದ ಜಯತು ಜಂಗಮರೂಪ
ಕೃಪೆಯ ಮನದೊಳು ಧ್ಯಾನ ಶಿವಲಿಂಗಸಂಧಾನ

ಪಾದಪೂಜೆಯ ಮಾಡಿ ಪಂಚಾಕ್ಷರಿಯ ಜಪಿಸಿ
ವೇದ ಪುರಾಣ ಗೀರ್ವಾಣ ಭಾಷೆಯಲಿ
ಆದಿ ಬಸವೇಶ್ವರನ ಅತ್ಯಂತ ಪರುಷದಲಿ
ಓದುವ ಶ್ರುತಿ ಶಾಸ್ತ್ರ ನಲಿದೆಯಾ ಸಿದ್ಧೇಶ

ಧರೆಗಧಿಕ ಎಡೆಯೂರು ಪುರದೊಳಗೆ ನೆಲಸಿರುವೆ
ಜಯತು ಜಡೆಸಿದ್ಧೇಶ । ಜ ಯ ತು ಜ ಯ ತು*

---

ಸದ್ಧರ್ಮದೀಪಿಕೆ. ಸಂಚಿಕೆ : ೧೩೯. [೧೦-೮-೧೯೫೭]
* ಕೊನೆಯ ಈ ಎರಡು ಸಾಲುಗಳನ್ನು ಸೇರಿಸಿ ಭಕ್ತರು ಹಾಡುವ ಪರಿಪಾಠವಿದೆ.

# ಧ್ಯಾನಿಸು ನೀ ಮನವೆ!

ಆದಿ ಜಗದ್ಗುರು ಸಿದ್ಧಲಿಂಗೇಶನ ಧ್ಯಾನಿಸು ನೀ ಮನವೆ ।
ನಿರುತದಿ ಧ್ಯಾನಿಸು ನೀ ಮನವೇ ! ॥ ಪ ॥

ಅಸಮಲೋಚನನಾಜ್ಞೆಯನವಧರಿಸುತೆ
ರಸೆಯೊಳಿಳಿದು ಶಿವಮತವನು ಸ್ಥಾಪಿಸಿ
ಮಿಸುಪ ಭಕ್ತರಾ ಮನದ ಕೊನೆಯೊಳು
ಎಸೆವ ತೋಂಟದಾಚಾರ್ಯವರೇಣ್ಯನ ॥೧॥

ಪುಂಡರ ಮತವಂ ಖಂಡಿಸಿ, ಭುವಿಜನ–
ತಂಡಕರುಹಿ ಚಿನ್ಮಯ ಸಿದ್ಧಾಂತವ
ದಂಡಿಸಿ ಭಂಡರ, ಮಂಡಿಸಿ ಯೋಗವ
ಪಂಡಿತ ಮಂಡಲ ವಂದ್ಯ ಯತೀಶನ ॥೨॥

ಮಂಗಲ ಲಿಂಗವನಂಗದಿ ಧರಿಸಿಹ
ತುಂಗ ಮಹೇಶನ ಸಂಗದಿ ಜೀವಿಪ
ತಿಂಗಳ ನಯನನ ರೂಪವನಾಂತಿಹ
ಅಂಗಜಭಂಗನ ಶಿವಕವಿಸಂಗನ ॥೩॥

# ಶಿವಸುಖದಾತ

ಬಿಡಬ್ಯಾಡೋ ಸಿದ್ಧಲಿಂಗನ ಧ್ಯಾನವ ನೀ ಮಾಡೋ ।
ತನು ಮನ ನೀಡೋ ನೀ ನೋಡೋ ॥ ಪ ॥

ಭಾಗ್ಯದ ಬಾಗಿಲು । ತೆರೆಯುವ ಸಮಯಕೆ
ಯೋಗ್ಯನ ನೀ ನೆನೆದಾಡೋ ॥ ೧ ॥

ಭಕ್ತರ ಬಯಕೆಯ । ಯುಕ್ತಿಯಿಂ ಸಲಿಸುವ
ಮುಕ್ತನ ಸ್ತೋತ್ರದೊಳಾಡೋ ॥ ೨ ॥

ದುರಿತಸಮೂಹವ । ಪರಿಹರಿಸುವ ಚರ ।
ವರಶಿವಯೋಗಿಯ ಪಾಡೋ ॥ ೩ ॥

ಎಡೆಯೂರು ವಾಸನ । ಯತಿ ತೋಂಟೇಶನ
ಮತಿವಂತನ ಕೊಂಡಾಡೋ ॥ ೪ ॥

ಶಿವಕವಿಪ್ರೀತನ । ಶಿವಸುಖದಾತನ
ಸವಿ ನೆನೆಯುತೆ ಕುಣಿದಾಡೋ ॥ ೫ ॥

# ಭಕ್ತಸಂಗ, ಮಂಗಲಾಂಗ

ಮನವೆ ಸಿದ್ಧಲಿಂಗಯತಿಯ । ನೆನೆಯೋ ಅನುದಿನ ॥ ಪ ॥

ಯಾಗ ತಪವ ಮಾಡಲೇಕೆ । ಯೋಗ ಜಪವ ನಡೆಸಲೇಕೆ ।
ರಾಗರಹಿತ ರಾಜಯತಿಯ । ಸ್ಮರಿಸಿ ಭಜನೆ ಮಾಡೋ ನೀ ॥೧॥

ಕದಲದಂಥ ಕರಣವಿರಲಿ । ಸದನ ಸಡಲಿ ಬೀಳುತಿರಲಿ ।
ಮದನನೊತ್ತಿ ಕಾಡುತಿರಲಿ । ಹೆದರಿ ಬೆದರಿ ಚೆದರದೆ ॥೨॥

ತುಂಗ ಶಿವಕವೀಶ ಸಿದ್ಧ । ಲಿಂಗ ತೋಂಟದಾರ್ಯ ಭಕ್ತ ।
ಸಂಗ ಜಂಗಮೇಂದ್ರ ಮಂಗ । ಲಾಂಗನೆಂದು ಸ್ಮರಿಸೊ ನೀ ॥೩॥

# ಬಂದಾನ ಬಂದಾನ...!

— ಶ್ರೀ ತಾಳಕೇರಿ ಬಸವರಾಜ ಗವಾಯಿ.

ಬಂದಾನ ಬಂದಾನ 'ಸಿದ್ಧಲಿಂಗ' ಸದ್ಗುರು।
ನಮ್ಮ ದೇವರು, ನಮ್ಮ ದೇವರು ॥
ತಂದಾನ ತಂದಾನ ಶಿವಸಿರಿಯ ಶ್ರೀಗುರು।
ನಮ್ಮ ದೇವರು ನಮ್ಮ ದೇವರು ॥ ಪ ॥

ಎಡೆಯೂರ ಸುಕ್ಷೇತ್ರವಾಸ
ಭೂಡವಿ ಪುಣ್ಯದ ಪ್ರಕಾಶ
ಭಾವಗಮ್ಯ ದೇವರಮ್ಯ
ದೇವ ದೇವ ಸುರಗುರು ನಮ್ಮ ದೇವರು ॥ ೧ ॥

ದಯಾಶಾಂತಿ ಕೃಪಾಮೂರ್ತಿ
ಪುಣ್ಯಗಣ್ಯ ಪ್ರಭಾಕೀರ್ತಿ
ಶಿವನಾಕೃತಿ ಶುಭದಾರತಿ
ವಿರತಿ ಪರಮ ಶ್ರೀಗುರು ನಮ್ಮ ದೇವರು ॥ ೨ ॥

ಸರ್ವದೇಶ ಸರ್ವಕಾಲ
ಸರ್ವವ್ಯಾಪ್ತ ನಿತ್ಯಲೀಲ
ಸರ್ವಸುಗುಣ ಸತ್ಯಶೀಲ
ಸರ್ವದಾನಿ ಶ್ರೀಗುರು ನಮ್ಮ ದೇವರು ॥ ೩ ॥

ಶಿವನ ಮಂಗಲಾತ್ಮರೂಪ
ಶಿವಸುಧರ್ಮ ದಿವ್ಯದೀಪ
ಶಿವಯೋಗ ಸುಸಿದ್ಧಿರೂಪ
ಸಿದ್ಧಲಿಂಗ ಚಿದ್ಗುರು ನಮ್ಮ ದೇವರು ॥ ೪ ॥

ಪಾಹಿ ಪಾಹಿ ಸಿದ್ಧಲಿಂಗ
ಪಾಹಿ ಪಾಹಿ ಭವವಿಭಂಗ
ಪಾಹಿ ಪಾಹಿ ಶರಣಸಂಗ
ಪಾಹಿ ಪಾಹಿ ಸದ್ಗುರು ನಮ್ಮ ದೇವರು ॥ ೫ ॥

ಕೃತಿ: ಶ್ರೀ ಎಡೆಯೂರ ಸಿದ್ಧಲಿಂಗೇಶ್ವರ ಪ್ರಾರ್ಥನೆ.
ಪ್ರ: ಶ್ರೀ ಅಂದಾನಪ್ಪ ಸಿದ್ಧಲಿಂಗಪ್ಪಮಾನ್ವಿ (ಬ್ರದರ್ಸ್) ಗದಗ. ಪುಟ ೧೫. [೫-೫-೧೯೬೫]

# ಸ್ವಾಮಿ ಧ್ಯಾನ ಮಾಡಬೇಕವ್ವಾ!

ಸಿದ್ಧಲಿಂಗಸ್ವಾಮಿ ಧ್ಯಾನ ಮಾಡಬೇಕವ್ವಾ ।
ಶುದ್ಧವಾಗಿ ಸಂಸಾರವು ಸಾಗುವುದವ್ವಾ ॥ ಪ ॥

ಮನೆಯ ಕೆಲಸ ಮಾಡುವಾಗ ಮನಸು ಬೇಸರಾಗುವಾಗ
ಮನಸಿನಿಂದ ಅವನ ಪಾದ ನೆನೆಯಬೇಕವ್ವಾ ।
ಉಣ್ಣುವಾಗ ತಿನ್ನುವಾಗ ಮಲಗುವಾಗ ಏಳುವಾಗ
ಕಣ್ಣುಮುಂದೆ ಅವನ ಮೂರ್ತಿ ನಿಲ್ಲಬೇಕವ್ವಾ ॥ ೧ ॥

ಎನಿತು ಕಷ್ಟ ನಷ್ಟ ಬರಲಿ ನೋಡುವನವ್ವಾ
ಕನಸಿನಲ್ಲಿ ಮನಸಿನಲ್ಲಿ ನಿಲ್ಲುವನವ್ವಾ ।
ತೊಟ್ಟಿಲನ್ನು ತೂಗುವಾಗ ಜೋಗುಳವ ಹಾಡುವಾಗ
ನಿಷ್ಠೆಯಿಂದ ಸ್ವಾಮಿ ಹೆಸರು ನೆನೆಯಬೇಕವ್ವಾ ॥ ೨ ॥

ಪುಟ್ಟ ಮಕ್ಕಳಾಡುವಾಗ
ಬಿಟ್ಟು ಹಾಲುಕುಡಿಯುವಾಗ
ಶ್ರೇಷ್ಠಸ್ವಾಮಿ ನೀನೆ ಎಂದು
ಕೈ ಮುಗಿಯಬೇಕವ್ವಾ! ॥ ೩ ॥

ಬಡವರಾಗಿ ಬಾಳುತಿರಲಿ, ಭಕ್ತಿಯನ್ನು ಮಾಡುತಿರಲಿ
ಒಡೆಯನಾಗಿ ಅವರ ಪೂಜೆ ಬಯಸಿ ಬರುವ ನೋಡವ್ವಾ!
ಬಲ್ಲಿದರೆಷ್ಟು ಕೊಟ್ಟರಿಲ್ಲ ಭಕ್ತಿಯಿಲ್ಲದಿರೆ ಅಲ್ಲಿ
ನಿಲ್ಲಲಾರ ನಿಂತು ಏನು ಮಾಡಲಾರ ನೋಡವ್ವಾ ॥ ೪ ॥

ಸುಜ್ಞಾನಗೀತೆ: ಪುಟ ೫.

# ಶಿವಸಿದ್ಧಲಿಂಗನಾಡಿದನುಯ್ಯಾಲೆಯಾ!

ತೂಗು ತೂಗೆನ್ನಯ್ಯನಾ । ಶಿವಸಿದ್ಧಲಿಂಗನಾಡಿದನುಯ್ಯಾಲೆಯಾ ।
ಕಂಗೊಳಿಪ ಚಂದ್ರಶಾಲೆಯು । ಮಧ್ಯದಲಿ ಹೊಂಗಳಶದಿಂದ ಮೆರೆವ ॥ ಪ ॥

ಸಂದಣಿಸಿ ಕುಂದಣದ । ಕೊಂಡಿಗಳು ಉಂಗುರದ ಸರಪಣಿಗಳು ।
ಚಂದದಿ ಅಳವಡಿಸಿ ಹಸೆ । ಮಣೆಯು ತಂದಿರಿಸಿ ಸಂಗೀತಗಳ ಪಾಡುತ ॥ ೧ ॥

ಗಗನಮಂಡಲದಿ ಮೆರೆವಾ । ಮಂಟಪಕೆ ಅರಿಸಿನ ಕುಂಕುಮ ಸಾರಣೀ।
ಅಗಣಿತದ ಮೇಲ್ಕಟ್ಟು । ಝುಲ್ಲಿಗಳು ಬಗೆ ಬಗೆಯ ಹೂಮಾಲೆಯು।
ಸೊಗಸು ಮಣಿ ತೋರಣಗಳು । ರಾಜಿಸುವ ಝುಗ ಝುಗಿಪ ಹೂಮಾಲೆಯು ॥ ೨ ॥

ಹೊಣ್ಣು ಚಾಮರ ಗಿಂಡಿಯು । ಪಿಡಿದು ಹಿಂದೆಡಬಲದೊಳೂ ಭಕ್ತರು।
ಹೊಡೆವ ನಾನಾ ಭೇರಿಯು । ಕೂಡೆ ಭೋರಿಡುತ ಬಹು ವಿಧಗಳಿಂದ।
ಬೆಡಗು ಬಿಂಕವ ಬೀರುತ । ಶಿವ ಸಿದ್ಧಲಿಂಗನಾಡಿದನುಯ್ಯಾಲೆಯಾ ॥ ॥ ೩ ॥

ಹೊನ್ನ ಹಾವುಗೆಯು ಧರಿಸಿ । ನಡೆಯುತಿರೆ ಸನ್ಮೋಹದಲಿ ಹಿರಿಯರು ।
ಉನ್ನತದಿ ಕೂಡಿಬರಲು । ಪರಮೇಶ ಸುಪ್ರಸನ್ನ ಹಸ್ತವ ಪಿಡಿದರು ।
ವೃಷಭೇಶ ಗಮನಕಂಡು । ತುಳುಕಿ ನಸುನಗುತಲಾಡಿರುಯ್ಯಾಲೆಯಾ ॥ ೪ ॥

ಕನ್ನೆಯರು ಕೈ ಆಡಿಸೆ । ವಾದ್ಯಗಳು ಬಿನ್ನಾಣದಿಂದ ನುಡಿಯಲು ।
ಮನ್ನಿಸುತ ಎಡಬಲದೊಳು । ಮುಖವ ನೋಡಿ ಸಂಪನ್ನನಾಡಿದರುಯ್ಯಾಲೆಯಾ ॥ ೫ ॥

ಆಗ ಮಂಗಳನೋದುತ । ಶಿವಶಾಸ್ತ್ರ ವೇದಗಳ ನೀವು ಪಾಡುತ ।
ಬಾಧೆಯನು ಪರಿಹರಿಸುತ । ಭಕ್ತರ ಮನದ ವ್ಯಾಧಿಗಳ ನೀಗುತ ॥ ೬ ॥

ದೇಶದೊಳು ನೀವು ಚರಿಸುತಾ । ಭಕ್ತರಿಗೆ ಬೇಡಿದಿಷ್ಟಾರ್ಥಗಳ ಕೊಡುತ ।
ದೇಶಕತ್ಯಧಿಕವಾದ ಎಡೆಯೂರ ಸಿದ್ಧೇಶನಾಡಿದರುಯ್ಯಾಲೆಯಾ ॥ ೭ ॥

'ಸುಜ್ಞಾನ ಗೀತೆ' ಸಂಗ್ರಹಕಾರರು : ಶರಣೆ ಸುಗ್ಗಲಾದೇವಿ, ಶರಣೆ ರವಿದೇವಿ ಸೊಲ್ಲಾಪುರ.
ಪುಟ ೧೦. ಬೆಲೆ ೪೦ ಪೈಸೆ. ೧೯೬೨.
ಪ್ರ: ಶ್ರೀ ವೀರಪ್ಪ ಲಕ್ಷ್ಮಪ್ಪ ಅಂಗಡಿ, ಗದಗ.

# ಪರಮಸಿದ್ಧಮಹೇಶ್ವರ

— ಶ್ರೀ ಭಸ್ಮಾಂಗದೇವರು

ಶರಣು ಬಂದೆವು ಪೊರೆಯೊ ತೋಂಟದ ಸಿದ್ಧಲಿಂಗ ದಯಾನಿಧೇ ।*
ಶರಣು ಶರಣರ ಪ್ರಾಣದೊಡೆಯನೆ ಸಿದ್ಧಲಿಂಗ ದಯಾನಿಧೇ ॥ ಪ ॥

ಕರದಿ ಲಿಂಗವ ಧರಿಸಿ ಮೆರೆಯುವ ವೀರಶೈವ ಕುಲಾಗ್ರಣಿ ।
ಪರಮ ಪಾವನ ಮಂತ್ರ ಬೋಧಿಪ ಕರುಣಿ ಶ್ರೀಗುರು ಸಿದ್ಧನೇ
ಪರಮಭಕ್ತರ ಪ್ರಾಣ ಪೊರೆಯುವ ಪಂಚಪರುಷದ ಸಿದ್ಧನೇ ।
ಕರವ ಜೋಡಿಸಿ ಪಾದ ಪಿಡಿದೆನು ಪೊರೆಯೋ ಶ್ರೀ ಗುರುಸಿದ್ಧನೇ ॥ ೧ ॥

ಅರ್ಘ್ಯಪಾದ್ಯಾಚಮನವೀಯುತ ನಿನ್ನ ಪಾದವ ಭಜಿಸುವೆ
ಸಖ್ಯ ಸುಖದಾವಸ್ತ್ರದಿಂದ ನಿನ್ನ ಪಾದವ ಒತ್ತುವೆ
ಆರ್ಯ ಶ್ರೀ ಗುರು ತೋಂಟದಾರ್ಯನೆ ಸಾಷ್ಟಾಂಗವೆಸಗಿ ಬೇಡುವೆ
ಕ್ರಿಯಾ ಜ್ಞಾನವ ಕರುಣಿಸೈ ಶ್ರೀ ಸಿದ್ಧಲಿಂಗ ದಯಾನಿಧೇ ॥ ೨ ॥

ತಂದೆ ನೀನೆ ತಾಯಿ ನೀನೆ ಬಂಧು ಬಳಗವು ನೀನೆಲೈ
ಸಂದ ಪೆಂಪಿನ ಲಿಂಗ ಸಂಗವ ಅಂಗದೊಳು ನೀ ಕರುಣಿಸೈ
ಗಂಧಪರಿಮಳ ನಿರ್ಮಲೋದಕದಿಂದ ಮಜ್ಜನ ಮಾಡುವೆ
ಅಂದವೇರುವ ಮೂರು ಎಳೆಗಳ ಭಸಿತ ಅಕ್ಷತೆ ಧರಿಸುವೆ ॥ ೩ ॥

ನೂರೆಂಟುಮಣಿ ರುದ್ರಾಕ್ಷಿಮಾಲೆಯು ನಿನ್ನ ಕೊರಳೊಳು ಧರಿಸುವೆ
ನೂರೆಂಟು ಪರಿಯಲಿ ಶಾಂತಿಗೊಳಿಸುವ ಕಾವಿಹೊದಿಕೆಯ ಹೊದಿಸುವೆ
ನೂರೆಂಟು ನಾಮವ ಜಪಿಸಿ ಬಿಲ್ವಾರ್ಚನೆಯ ನಾನೆಸಗುವೆ
ನೂರೆಂಟು ತೆರೆದಾ ಪುಷ್ಪ ಧೂಪ ದೀಪಮಾಲೆಯ ಬೆಳಗುವೆ ॥ ೪ ॥

* ಧಾಟಿ : 'ಸ್ವಾಮಿದೇವನೆ ಲೋಕಪಾಲನೆ ತೇ ನಮೋಸ್ತು ನಮೋಸ್ತುತೇ'
ಆಕರ : ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗಿಗಳ ಭಕ್ತಿಗೀತೆ (ಕಿರುಕೃತಿ) ೧೯೬೬ ಬೆಲೆ ೪ ಆಣೆ

ಶುಚಿಯು ಕೂಡಿ ಭಕ್ತಿನೈವೇದ್ಯ ತಾಂಬೂಲವೀಯುವೆ
ರಚಿಸಿ ನಲಿಯುವ ಮಂಗಳಾರತಿ ಹರುಷದಿಂದಲಿ ಪಾಡುವೆ
ರಚನೆಗೊಳಿಸುವ ನಾಟ್ಯ ನೃತ್ಯದಿ ನಿನ್ನ ಪಾದವ ಒಲಿಸುವೆ
ಅಚಲಭಕ್ತಿಯನಿತ್ತು ಸಲಹೈ ಶ್ರೀ ಸಿದ್ಧಲಿಂಗದಯಾನಿಧೇ ॥ ೫ ॥

ಅಷ್ಟಾವರಣವ ಕೊಟ್ಟು ಸಲಹೈ ಪರಮಪಾವನ ಮೂರ್ತಿಯೆ
ಕಷ್ಟ ನಷ್ಟವ ದಹಿಸಿ ಕರುಣದಿ ಪ್ರಾಣ ಪೊರೆಯುವ ಪ್ರೀತನೆ
ಪುಷ್ಟಿಗೊಂಡೆವು ನಿನ್ನ ದಯದಲಿ ಪಂಚಾಚಾರವ ಕರುಣಿಸೈ
ಶ್ರೇಷ್ಠ ಷಟ್ಸ್ಥಲಸಂಗ ಶ್ರೀಗುರು ಸಿದ್ಧಲಿಂಗ ದಯಾನಿಧೇ ॥ ೬ ॥

ಪರಮ ಶ್ರೀಗುರುಸಿದ್ಧಲಿಂಗನ ಸ್ತೋತ್ರಮಾಲೆಯ ನಿತ್ಯದಿ
ಬರೆದು ಓದಿ ಕೇಳಿ ಸುಖಿಸುವ ಸತ್ಯಶರಣರ
ಕರದಿ ರಾಜಿಪ ಇಷ್ಟಲಿಂಗದ ಯೋಗ ಸಮರಸ ಸಿದ್ಧಿಸಿ
ಪರಮ ಪಾವನ ಪೊರೆಯೊ ತೋಂಟದ ಸಿದ್ಧಲಿಂಗ ದಯಾನಿಧೇ ॥ ೭ ॥

ಮಂಗಳಾರತಿ ತಂದು ಬೆಳಗುವೆ ಸಿದ್ಧಲಿಂಗಯತೀಶಗೆ
ಅಂಗದೊಳು ಶಿವಲಿಂಗ ತುಂಬಿಹ ಶರಣರೆಲ್ಲರ ಪ್ರೇಮಿಗೆ
ಅಂಗ ಮನ ಭಾವದೊಳು ಲಿಂಗದ ಬೆಳಗ ಸೂಸುವ ಸ್ವಾಮಿಗೆ
ಸಂಗಮೇಶನ ಸುಖದ ಸುಗ್ಗಿಯ ಸಿದ್ಧಲಿಂಗಯತೀಶಗೆ ॥ ೮ ॥



# ಎಡೆಗೊಂಡಿದೆ ಸಿದ್ಧನ ನಿಲವು

ಸಿದ್ಧಲಿಂಗ ಶಿವ ಮಹಿಮೆಯನು
ಶುದ್ಧಮನದಿ ನುತಿಸುವೆ ನಾನು ॥ ಪ ॥

ಜಂಗಮ ರೂಪವ ಧರಿಸಿರುವೆ
ಭಂಗುರ ಭವ–ಭಯ ನೀಗಿಸುವೆ ।
ಮಂಗಲಮಯ ಮುಕ್ತಿಯ ಪದವ
ಲಿಂಗಭಕ್ತರಿಗೆ ಕರುಣಿಸುವೆ ॥ ೧ ॥

ನಿರುಪಮ ಶಾಂತಿವಿಭೂಷಿತನೆ
ಪರಶಿವ ಯೋಗವಿರಾಜಿತನೆ ।
ಧರೆಯ ರಕ್ಷಣೆಗೆ ಬಂದವನೆ
ತೋಂಟದ ಯೋಗೀಶ್ವರನೆ ॥

ಆರನಳಿದ ಘನ ಯೋಗಿವರ
ಮೂರು ಕಳೆದ ಮನ ಶಾಂತಿಭರ ।
ವೀರಶೈವ ಸುಜ್ಞಾನಪರ
ಚಾರು ಷಟ್ಸ್ಥಲ ಬೋಧಕರ ॥ ೨ ॥

ಸಿದ್ಧಲಿಂಗ ಪರಮಾತ್ಮ ಪದ
ಬದ್ಧಲಿಂಗ ಶಿವಯೋಗಿ ಹೃದ ।
ಶುದ್ಧ ವೀರಶೈವರಿಗೊಲಿದ
ನಿದ್ರಾಯೋಗದಿ ಮೈಮರೆದ ॥

ಪೊಡವಿಯ ಘನ ಸುಕ್ಷೇತ್ರದಲಿ
ನಡುವಣ ವನ ಕಗ್ಗೇರಿಯಲಿ ।
ಅಡಗಿದೆ ಯೋಗದ ಹುತ್ತದಲಿ
ಕೊಡ ಹಾಲು ಆಕಳ ಮೊಲೆಯಲ್ಲಿ ॥ ೩ ॥

ಎಡೆಯೂರಿನ ಮುಕ್ತಿಸ್ಥಲವು
ಮೃಡಭಕ್ತರ ಭಕ್ತಿಸ್ಥಲವು
ಎಡೆಗೊಂಡಿದೆ ಸಿದ್ಧನ ನಿಲವು
ನಡೆಗೊಂಡಿದೆ ಭಕ್ತರ ಒಲವು

ಸಂಗ್ರಾಹಕರು : ಸೌ॥ ಶಾಂತವ್ವ ಕೋರಿ ಮಲ್ಲೇಶಪ್ಪ ಕಾಳಗಿ.
ಕಾರ್ಯದರ್ಶಿನಿ : ಅಕ್ಕನ ಬಳಗ, ಗದಗ. (ಶಹಪೂರಪೇಟೆ)

# ತುಂಟರೆದೆಯನೊಡೆದ ಬಂಟ

— ನ್ಯಾಕರಣಾಳ ಶ್ರೀ ಪಟ್ಟದ ದೇವರು.

ತೋಂಟದಾರ್ಯನೇ ದೈವ । ತೋಂಟದಾರ್ಯನೇ ॥
ಕಂಟಕಾದಿಗಳನು ದಾಂಟಿ । ತುಂಟರೆದೆಯನೊಡೆದ ಬಂಟ ॥ ಪ ॥

ಕಂಚರೊಡ್ಡ ರುಪಟಳದಿ । ವಂಚನಕ್ಕೆ ಬೆದರದೆಂದು ॥
ಪಂಚಯೋಗದಾಳ್ದು ನಿಂದು । ಮಿಂಚುವಂತೆ ಯೋಗಿಯಾದ ॥ ೧ ॥

ನಂಬಿಗೈದ ಬಿನ್ನಪವನೆ । ನಂಬುತಾ ಸಮಾಧಿಗೊಂಡ ॥
ತುಂಬಿದಾರು ತಿಂಗಳತ್ತ । ಲಿಂಬುದೋರಿ ಸಲಿಸಿಕೊಂಡ ॥ ೨ ॥

ಕಪಟದಿಂದ ಬಂದು ನಿಂದ । ಚಪಲರೆದೆಯ ನುಗ್ಗುವಡೆದ ॥
ತಪೋಗುಣವನಾಚರಿಸಿ । ಸುಪಥ ತೋರಿದ ಆದಿಕರ್ತ ॥ ೩ ॥

ಕೆಡಿಸಿದವರನೆಲ್ಲ ಸಲಹಿ । ಮೃಡ ಸುಯೋಗದೊಳಗೆ ಮುಳುಗಿ ॥
ಒಡೆಯರೊಡನೆ ಚರಿಸಿ ಬರಿಸಿ । ಜಡವನೋಡಿಸಿರ್ದ ಸಿದ್ಧ ॥ ೪ ॥

ಮಲ್ಲಿನಾಥನಲ್ಲಿಗೈದು । ಬಲ್ಲತನದ ಭಕ್ತಿಗೊಲಿದು ॥
ಕ್ಷುಲ್ಲಜನರ ಗುಲ್ಲುವಡೆದು । ಲಲ್ಲೆಯಿಂದ ಜಗವ ಪೊರೆದ ॥ ೫ ॥

ಗೌಡಿ ತಂದ ಪಾಲನುಂಡು । ಜೇಡಹುಳದ ಬಟ್ಟೆದೊಟ್ಟು ॥
ಬೇಡಿದವರಿಗೀಡು ಕೊಟ್ಟು । ನಾಡನಾಳಿದಾದಿದೇವ ॥ ೬ ॥

ಮಾಯೆಯಿರವನೆಲ್ಲ ಪಿಂಗಿ । ಮಾಯಿದೇವ ಭಕ್ತಿಯಂಗ ॥
ರಾಯವಿಡಿದು ಸುಗುರುಲಿಂಗ । ಕಾಯೊ ಸಿದ್ಧಿದಾತ ತುಂಗ ॥ ೭ ॥

---

ಪರಮಪೂಜ್ಯ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರು, ಗಿರಿಯಾಪುರ – ಅವರು ನನ್ನ ಪ್ರಾರ್ಥನೆಯ ಮೇರೆಗೆ ಒದಗಿಸಿದ ಸ್ತುತಿಯಿದು. – (ಸಂಪಾದಕ).

# ವರಶೈವಧೇನು ಸಿದ್ಧಲಿಂಗೇಶ

— ಶ್ರೀ ತಾಳಕೇರಿ ಬಸವರಾಜ ಗವಾಯಿ.

ಕರುಣಾಳು ಎಡೆಯೂರವಾಸ ಸಿದ್ಧಲಿಂಗೇಶ
ಪೊರೆಯೋ ಹೇ ಪರಮೇಶ ದೇವಾಧಿದೇವ ॥ ಪ ॥

ಭವದಲ್ಲಿ ಬಂದೆ ಗತಿಯೇನು ಮುಂದೆ
ತವಸೇವೆಯೊಂದೆ ಬೇಡುವೆನು ತಂದೆ ॥ ೧ ॥

ಭಕ್ತಿಯ ಪಥವ ಮುಕ್ತಿಯ ನಿಲವ
ತೋರಿಸಿ ಅಭವ ಕೃಪೆಯಾಗು ದೇವ ॥ ೨ ॥

ವಿರತಿಯ ಭಾನು ವರಶೈವಧೇನು
ಪರಶಿವನೆ ನೀನು, ಶರಣೆಂಬೆ ನಾನು ॥ ೩ ॥

ಶಿವಮಂತ್ರಪ್ರಾಣ ನೀನೇ ಪ್ರಮಾಣ
ತವ ನಾಮ ಸ್ಮರಣ ಭವತಾಪಹರಣ ॥ ೪ ॥

ತನುಮನಧನವು ನಿನಗೆ ಅರ್ಪಣವು
ಕರುಣೆ ನಿನ್ನೊಲವು ಇರಲೆನಗೆ ಬಲವು ॥ ೫ ॥

ಜಗದೇಕಗುರುವೆ ಜಗವ ತುಂಬಿರುವೆ
ನೆನೆಸಿದಲ್ಲಿರುವೆ ಹೇ ಕಲ್ಪತರುವೆ ॥ ೬ ॥

~~~~~~~~

'ಕಲ್ಯಾಣಗೀತಾ' ಪುಟ ೨.
~~~~~~~~

# ಶ್ರೀ ಸಿದ್ಧಲಿಂಗೇಶ್ವರ ಲಾವಣಿ

— ಶ್ರೀ ಮಾ. ನಂ. ನಂಜಪ್ಪನವರು.

ತುಂಗ ಮಹಿಮ ಕರುಣಾಂಗ ಭವದ ಭಯಭಂಗ
ಕರುಣಿಸು ಕೃಪಾಂಗ ಗುರುವೆ ಸಿದ್ಧಲಿಂಗ
ಲಿಂಗ ಮದನ ಮದಭಂಗ ಶರಣಜನ ಸಂಗ
ಸುಪ್ರಭೆಯ ಅಂಗ ತೋಂಟದ ಸಿದ್ಧಲಿಂಗ ॥ ೧ ॥

ಗುರುವರ ಸುಪ್ರಭಾಕರ ಪ್ರಣವ ಓಂಕಾರ
ಪರಮ ಪರತರ ಸಿದ್ಧಲಿಂಗೇಶ್ವರ
ಹರಹರ ದುರಿತ ತಮಹರ ಭಕ್ತರುದ್ಧಾರ
ನಿರಂಜನವರ ಸಿದ್ಧಲಿಂಗೇಶ್ವರಾ ॥ ೨ ॥

ಬೆಳ್ಳಿಯಾ ಬೆಟ್ಟ ಚಿನ್ನದಾ ಸೌಧ ರನ್ನದಾ ಮಂಟಪದ ನಡುವೆ
ಉನ್ನತ ಮಣಿಯ ಮಾಣಿಕ್ಯಪೀಠ ಮೆರೆದಿತ್ತು
ಥಳಥಳಿಪ ದಿವ್ಯಪ್ರಭೆಯೊಳಗೆ ಮೆರೆವ ಹಣೆಗಣ್ಣ ಚಂದ್ರಶೇಖರನು
ಧವಳಾಂಗ ಶೂಲಿ ಗಂಗೇಯ ಧರಿಸಿ ಕುಳಿತಿರಲು ॥ ೩ ॥

ಎಡಬಲದಿ ಉಮೆಯು ಗುಹ ಗಣಪರಿರಲು ಕೈಮುಗಿದು
ಮೃಡಭಕ್ತ ಮೌನಿ ಸಪ್ತರ್ಷಿ ಗರುಡ ಗಂಧರ್ವಗಡಣವೂ ಎರಗಿ
ದೃಢಭಕುತಿಯಿಂದ ಹಾಡುತ್ತ ಕುಣಿದು ಕುಕಿಲಿರಿದು
ಶಿವಮಹಾದೇವ ಬಹುಪರಾಕೆಂದು ವಂದಿಸಲು ॥ ೪ ॥

ಜಡೆ ಮುಡಿಗೆ ಮಲ್ಲಿಗೆ ಧರಿಸಿ ಕೈಯಲಿ
ಹಿಡಿದು ಮಹತಿಯ ವೀಣೆ ಬಾಜಿಸುತ
ಮೃಡ ಮಹಾದೇವನನು ಪಾಡಿ ನಾರದ ಯತೀಂದ್ರ
ಪೊಡಮಟ್ಟು ಏಳದಿರೆ ದೇವಿ ಪಾರ್ವತಿಯು ಕಂಡು ॥ ೫ ॥

ಸ್ವಾಮಿ ಜಗದ ಅಭಿರಾಮ ನಿಗಮನುತ ನಾಮ
ಸುಗುಣಿ ನಾರದ ದುಗುಡದಿಹನೆನಲ್
ಸೋಮಧರನು ಜಿತಕಾಮ ಕಮಲಭವಸುತನ
ಏಳುನಾರದ ಚಿಂತೆ ಯಾಕೆನಲು ॥ ೬ ॥

ದೇವಮುನಿಯು ನಾರದ ಭಾವಚಾರಿಯ
ಮಹತಿ ವೀಣೆಯ ಮಧುರತಾನದೊಳ್ ನಮಿಸಿ ನುತಿಸಿ
ಜೀವಕೋಟಿಗಧಿದೈವ ದೇವಕುಲ ಸಾರ್ವ –
ಭೌಮ ಲಾಲಿಪುದು ಬಿನ್ನವಿಪೆನೆಂದು ॥ ೭ ॥

ಶಿವಾಧವನೆ ಭುವನವ ಚರಿಸುತಲಿ ತವ
ಮಹಿಮಗೀತವ ಪಾಡುತಲಿ ಕಂಡೆ ದುರ್ಭರಂವ
ಜೀವ ಹಿಂಸಕರ ದೇವನಿಂದಕರ ಪಾಪಕಂಜದಿಹ
ದೈವ ಮರೆಯುತಲಿ ಸಾವ ಅಪ್ಪುತಿಹ ದುಃಖಿ ದರಿದ್ರರ ಕಂಡೆ ॥ ೮ ॥

ಗುರು ಹಿರಿಯರಿವರೆಂಬ ಅರಿವಿರದ ಮಂದ
ಮರಹು ಚಕ್ಕಂದ ಜೀವಿಗಳ ಕಂಡೆ ನೋವನೆ ಉಂಡೆ
ಹರ ಶರಣುಶಂಕರ ಭರದಿ ಬೆಳೆದಿಹ
ಧರೆಯ ನಾಸ್ತಿಕನಿಕರವನು ಪೊರೆಯೊ ಚಂದ್ರಧಾರಿ ॥ ೯ ॥

ಸುಳ್ಳು ನುಡಿಯು ಜಗವೆಲ್ಲ ಕಳುವು ಹಿಂಸೆ
ಸೊಲ್ಲು ಸೊಲ್ಲಿಗೆ ಪರನಿಂದೆ ಆತ್ಮಸ್ತುತಿ
ಎಲ್ಲಿ ನೋಡಲೂ ಕಾಮ ಕ್ರೋಧ ಮದ
ಅಲ್ಲಿ ತುಂಬಿದೇ ದೇವಾ ಪೊರೆ ಜಗವ ॥ ೧೦ ॥

ಇಂತು ನಾರದನ ಚಿಂತಾ ಬಿನ್ನಪವ
ಕಂತುಹರನು ಕೇಳಿ ಸಂತೈಸುತಾ
ಸಂತ್ರಸ್ತ, ಭುವಿಯುದ್ಧಾರಕ್ಕೆ ಕಳುಹಲು
ಅಂತರಂಗದಲಿ ಚಿಂತಿಸಿರೆ ॥ ೧೧ ॥

ಇಂದುಧರನ ಹೃದಯಾಬ್ಜಮಂಡಿತನು
ಕಂದುಗೊರಳ ಪ್ರತಿರೂಪ ಬಸವಪ್ರಭು
ಚಂದದಿಂದ ಹೃದಯಾಂತರಂಗದಾ –
ನಂದ ಜಂಗಮವು ಪೋಪ್ಪುದೆಂದು ಉಲಿಯೆ ॥ ೧೨ ॥

ಆಗ ಅಂಬಿಕೆ ಅಚ್ಚರೀ ಪಡುತ ಭೋ
ಜಗನ್ನಾಥ ಒಳಗಿಂದ ಉಲಿವರಾರೆನಲು
ನಾಗಭೂಷ ಅಗಜೆಗೇ ಆಗ ಅರುಹಿದಾ ನಿಜವ ತಾ ಬೇಗ
ರಾಗಧ್ವಂಸಿ ಬಸವೇಶ ಎನ್ನ ಹೃತ್ಕಮಲದಿಂದುಲಿದನೆಂದು ॥ ೧೩ ॥

ಅಚ್ಚರಿಪಡುತ ಪಾರ್ವತಿ ಎನಗೆ ದರುಶನ ಕೊಡಿಸಿರೆಂದೆನಲು
ಸಚ್ಚರಿತ್ರನ್ನ ಬಸವೇಶ್ವರನ್ನ ಹೃತ್ಕಮಲ ತೆರೆದು ತಾ ಸತಿಗೆ
ಅಚ್ಯುತ ಅಮರ ಭಕ್ತಿಗಾಧಾರ ಮುಕ್ತಿಗೇ ಮೂಲನಿವನೆಂದು
ಸಚ್ಚಿದಾನಂದ ಚಿತ್ರಭಾಮೂರ್ತಿ ಜಂಗಮವ ತೋರಿಸಿದನಾಗ ॥ ೧೪ ॥

ಶರಣರಾ ಜೀವ ಸರ್ವಕಾರುಣ್ಯ ನಿಗ್ರಹಾನುಗ್ರಹ ಶಕ್ತ
ನಿರುಪಮಾನಂದ ಬಸವೇಶನೆಂದು ಸರ್ವೇಶಸತಿಗೆ ತಾ ಪೇಳೆ
ಕರಕಮಲಮುಗಿದು ರುದ್ರಾಣಿಭಕ್ತಿ ಆನಂದ ಅಶ್ರು ಪುಳಕಿತೆಯಾಗಿ
ಪರಜಂಗಮಾತ್ಮ ಗುರುಬಸವಲಿಂಗವನು ಹರ್ಷದಿಂದ ಪೊಗಳಿದಳಾಗ ॥ ೧೫ ॥

ಇಂತು ಶಿವೆಯು ಹೊಗಳಲು ಶಿವನ ಹೃತ್ಕಮಲ ಬಸವ ಜಂಗಮವು
ಕಂತುಹರನ ಹೃದಯಾಬ್ಜದಿಂದ ಪೊರಮಟ್ಟು ಜಗವನುದ್ಧರಿಸಲ್
ಮಂತ್ರಮೂರ್ತಿ ನಿತ್ಯನೂ ಸನಾತನ ಸದಾನಂದ ಸದ್ಗುರುವೂ
ಸಂತತಾನಂದ ಜಂಗಮಾಲಿಂಗ ಧರೆಗಿಳಿಯೆ ॥ ೧೬ ॥

ಘನಮಹಿಮ ಜಂಗಮ ಸಂತಸದಿ ಧರಾತಳಕೆ ಬರುತಿರಲು
ವನಜಲಧಿ ಜಲಚರ ಖಗಮೃಗಗಳಿಂದ ಶೋಭಿಸುತ್ತಿದ್ದ
ಮನುಕುಲವು ಸಕಲೆಂಟು ಭಾಗ್ಯಸಂತೋಷದಿಂದ ಬಾಳಿದ್ದ
ಅನುಪಮದ ಬಹುರತ್ನ ವಸುಂಧರೆ ಕರ್ನಾಟವು ಕೈಬೀಸಿರಲು ॥ ೧೭ ॥

ಸದಾ ಮುದಿಸಿದಾ ಗಜಾರಣ್ಯದಾ ಕಣ್ಣ-ಪುಣ್ಯ ತೆಂಕಲದೆಶೆಗೇ
ಮುದಾ ಎರಡು ಯೋಜನಾ ಅಳತೆಯೊಳ್ ರಾಮಣೀಯಕದೆ ರಂಜಿಸುತ
ಮೇದಿನೀ ಲಲನೆಗಿಟ್ಟ ಕುಂಕುಮದ ಬಟ್ಟೊ ಎಂಬ ತೆರ ಮಂಗಲದೆ
ಸುಧಾ ಮಧುರ ಮಂಜುಳಭಜನೆಯ ವಣಿಜಪುರಿಯು ತಾ ಕಂಗೊಳಿಸೆ ॥ ೧೮ ॥

ಅಲ್ಲಿ ಮಹಾಮಹಿಮೆಯ ಭವ್ಯದೇಗುಲ ಚೆಲ್ವಿನಿಂ ಬೆಳಗೆ
ಎಲ್ಲ ವಣಿಜರೂ ಭಕ್ತಿ ಸಲ್ಲಿಸುತ ಚಂದ್ರಧರನ ಪೂಜೆಯೊಳಿರಲೂ
ಚೆಲ್ವ ದೇಗುಲದ ಪೂರ್ವಕಥಾಮೃತ ಎಲ್ಲೆಡೆಗೂ ಪಸರಿಸುತಿರಲೂ
ಸೊಲ್ಲು ಸೊಲ್ಲಿಗೂ ಎಲ್ಲರ ಮನದಲಿ 'ದಿವ್ಯಲಿಂಗೇಶ್ವರ' ನೆಲಸಿರಲೂ ॥ ೧೯ ॥

ನವ್ಯ ದಿವ್ಯಲಿಂಗೇಶ್ವರಾಲಯದ ಸಮಯಾಚಾರಕೆ ಮಠವೊಂದ
ಭವ್ಯವಾಗಿ ವಣಿಜರು ನಿರ್ಮಿಸುತ ಚಿತ್ರವಿಚಿತ್ರದಿ ಅಣಿಗೊಳಿಸಿ
ದೈವಭಕ್ತಿ ಕಾಯಕಶಕ್ತಿ ಶರಣರ ಸೂಕ್ತಿಗಳ ಪಸರಿಸಲು
ಭಾವ್ಯ ಚರವರ ಅನಾದಿಗಣೇಶ್ವರ ಮೂರ್ತಿಯ ನೆಲೆಗೊಳಿಸಿದರಲ್ಲಿ ॥ ೨೦ ॥

ಮುಂದು / ...

ಮನೋನಿಗ್ರಹದ ಅನಾದಿಗಣವರ ಬಳಿಕ ಆದಿಗಣನಾಥ
ಜ್ಞಾನಮೂರ್ತಿ ನಿರ್ಮಾಯ, ನಿರಂಜನ, ಜ್ಞಾನಾನಂದರೂ ಕ್ರಮವಾಗಿ
ಧ್ಯಾನಿ ಆತ್ಮಗಣನಾಥ ಬಳಿಕ ಅಧ್ಯಾತ್ಮ ಗಣೇಶರ ಪರಂಪರೆ
ಮೌನಿ ರುದ್ರಗುರು ಬಸವಗಣೇಶ್ವರ ಆದಿಲಿಂಗ ಗಣವರರಾಗೆ ॥ ೨೦ ॥

ಪುಣ್ಯಮೂರ್ತಿ ಗುರುಚನ್ನವೀರೇಶ್ವರ ಗೋಸಲಯತಿಗಳು ಆ ಬಳಿಕ
ಗಣ್ಯಸೂರಿಗಳು ಶಂಕರೇಶ ಶ್ರೀ ದಿವ್ಯಲಿಂಗ ಶಿವಯೋಗಿಗಳು
ಸ್ವರ್ಣತೇಜದ ವಿರಾಜಮೂರ್ತಿ ಗುರುಚನ್ನಬಸವ ದೇಶಿಕರಿರಲು
ಧನ್ಯವೆನಿಸಿ ವಾಣಿಜ್ಯಪುರಿಯು ದಶದಿಕ್ಕಿನ ಮಾನ್ಯತೆ ಪಡೆದಿತ್ತು ॥ ೨೧ ॥

ಜ್ಞಾನಾಂಬೆ ಮಲ್ಲಿಕಾರ್ಜುನರು ತಮ್ಮ ವಟುವನ್ನು
ಮನ್ನಣೆಯ ವಣಿಜಪುರಿ ಮಠದ ಗುರುಗಳಾಗಿದ್ದ
ಸನ್ನುತಾ ಚನ್ನಬಸವೇಶದೇಶಿಕರ ದಿವ್ಯಸನ್ನಿಧಾನಕ್ಕೆ
ಸನ್ನಿಯೊಳು ತಂದು ಸ್ವೀಕರಿಸಿ ಎಂದು ಬಿನ್ನವಿಸೆ ॥ ೨೨ ॥

ಪರಾತ್ಪರವೆ ಕಾರುಣ್ಯಶರಧಿಯೇ ಕರುಣಿಸೆಂದು ವಟು ಪ್ರಾರ್ಥಿಸಲು
ಚರಾ ಗುರುವರನು ವರದ ಹಸ್ತವನು ವಟುಮಸ್ತಕಕೇ ತಾ ಸೋಂಕಿಸುತ
ಪರಿಪೂರ್ಣವಿಧ್ಯುಕ್ತ ವಿರತಿಯನು ಕರುಣಿಸುತ್ತ ಆ ಕ್ಷಣದೊಳಗೆ
ಪರಾತ್ಪರವೆ ಶಿವಸಿದ್ಧಲಿಂಗ ಶಿವಯೋಗಿಯೆನಿಸಿ ಪೊರೆ ಜಗವೆನಲು ॥ ೨೩ ॥

ಮುಂದೆ ಮಹಿಮೆ ಒಂದೊಂದೇ ಮೆರೆದು ನೀರಿಂದ ದೀಪಗಳ ಬೆಳಗಿಸುತ
ಚಂದ್ರಧಾರಿ ಅರುಣಾಚಲೇಶ ವರಕುಂಬಳೇಶ ಮಹಿಮೆಯ ಮೆರೆದು
ಕಂದುಗೊರಳ ತ್ರ್ಯಂಬಕನ ನುಡಿಸಿ ಮುಂದೆ ಯುವನರಾಜನನು ಬದುಕಿಸುತ
ತಂದೆ ಮಹಾಬಲಲಿಂಗಮಸ್ತಕದೆ ಬತ್ತಿದ ಜಲವನು ಭೋರ್ಗರೆಸಿ ॥ ೨೪ ॥

ಮತ್ತೆ ಮಣಿಜಪುರದತ್ತ ಪದವ ಬೆಳಸುತ್ತ ನಡೆದಿರಲು ಅತ್ತ
ಸುತ್ತ ಮುತ್ತಲಿನ ಭಕ್ತ ಸಂದಣಿಯು ಛತ್ರಚಾಮರದೊಳೆದುರಾಗೆ
ಮತ್ತೆ ಮಾತೆ ಪಿತ ಜ್ಞಾನಾಂಬೆಯು ಮೇಣ್ ಮಲ್ಲಿಕಾರ್ಜುನರು ಮನದುಂಬಿ
ಸ್ತುತ್ಯಯೋಗಿಯನು ನಮಿಸಿ ಮೈದಡವಿ ಮತ್ತೆಮತ್ತೆ ಸ್ತುತಿಸುತ್ತಿರಲು ॥ ೨೫ ॥

ಶಿವಸಿದ್ಧಲಿಂಗೇಶ ವೃದ್ಧಗುರು ದರ್ಶನಕ್ಕೆ ಕಾತರರಾಗಿ
ಭವಹರನ ಗೋಸಲಚನ್ನಬಸವೇಶರ ಚರಣಾಂಬುಜಕೆರಗಿ
ಸುವಿಧಾನದಿಂದಲಿ ಶಿವಾನುಭಾವದ ಸದ್ಗೋಷ್ಠಿಯ ನಡೆಸುತ್ತ
ಶಿವಶರಣ ತಿಂತಿಣೀಸಹಿತ ಪರಿಣಾಮಿಯಾಗಿ ಸಂಚರಿಸುತ್ತ ॥ ೨೬ ॥

ನಿಂತು ಕಗ್ಗೆರೆಯ ಕುಸುಮೋದ್ಯಾನದಿ ಹುತ್ತದಿ ಶಿವಯೋಗವ ಗೈದು
ಮಂತ್ರಮೂರ್ತಿಯನು ಕಚ್ಚಿ ತಾನೆ ಸತ್ತಿದ್ದ ಸರ್ಪವನು ಬದುಕಿಸುತ
ಸಂತಮೂರ್ತಿ ಗಂಧರ್ವಭೂತವೆರಡರಾ ಶಾಪವನು ಕಳೆಯುತಲಿ
ಚಿಂತೆ ಹರಿಸಿ ನಂಬೆಣ್ಣನ ದಾಸಿಯ ಭಕ್ತಿಯ ಕೆನೆಹಾಲ್ ಸವಿಯುತ್ತ ॥ ೨೮ ॥

ಶಂಭು ಅಕಾಲದಿ ಜಂಬೂಫಲವ ಕೊಟ್ಟು ಎಣಿಸಲಾಗದೆಳನೀರ್ ಕುಡಿದು
ರಂಭಾಫಲದ ರಾಶಿಯನೆ ಮೆದ್ದು ಕಹಿಸೋರೆಯನ್ನು ಬಹುರುಚಿಗೊಳಿಸಿ
ಡಂಬ ಕುಟಿಲಗಳೆ ತುಂಬಿ ವಿಜೃಂಭಿಸಿದ ಲಿಂಗಣ್ಣೊಡೆಯನನು ಮನ್ನಿಸುತ
ತುಂಬಿ ಸುಟ್ಟ ಹುಲಿಯೂರಿನ ಜನಗಳ ಜ್ವರವ ಹರಿಸಿ ಉದ್ಧರಿಸುತಲಿ ॥ ೨೯ ॥

ಶಿಲಾವೃಷಭನಿಗೆ ಪ್ರಸಾದ ಸವಿಯಿಸಿ ಪುಷ್ಪಕದಲಿ ತಾ ಹೊರಟು
ಛಲ ವಾದಿಸಿದ ಧರ್ಮಶುಂಠರನು ಮಹಿಮೆಯಿಂದ ಜಯಿಸುತ್ತ
ಜಲ ಬತ್ತಿ ಒಣಗಿದ್ದ ತೋಟದಲಿ ಜಲ ಉಕ್ಕಿಸಿ ಕಬ್ಬನು ಬೆಳಸಿ
ಚೆಲ್ವಯೋಗಿ ಒಂಬತ್ತುಕೊಳಗ ಕ್ಷೀರಾಭಿಷೇಕವನು ಕೈಗೊಂಡು ॥ ೩೦ ॥

ನಾರಿ ಕದ್ದ ಗಣಪರ್ವದ ಬದನೆಯ ಬೇಯದಂತೆ ಅದಮಾಡುತಲಿ
ಧೀರಭಕ್ತನಿಗೆ ಕೊಡದ ತಳಿಗೆಗಳ ಅಲ್ಲಲ್ಲಿಯೆ ಮಾಯವ ಮಾಡಿ
ಸಾರ ಪಾದತೀರ್ಥವನು ಮರೆತವಗೆ ಮಹಿಮೆಯಿಂದ ಬುದ್ಧಿಯ ಕಲಿಸಿ
ಕೆರೆಯೊಳಗೆ ತೇಲಿಹೋಗಿದ್ದ ಕೊಡಪಾನ ಹಿಂದಕೇ ಬರಿಸುತಲಿ ॥ ೩೧ ॥

ಪ್ರಭೂ ಭಸ್ಮಗಟ್ಟಿಯ ಸ್ಫಟಿಕಲಿಂಗವ ಮಾಡಿ ಮಹಿಮೆಯ ಮೆರೆದು
ಶುಭಾ ತುಂಬೆ ಹೂಮಳೇ ಕರೆಯಿಸೀ ತೇಲಿಹೋದ ಬಿಂದಿಗೆ ಬರಿಸೀ
ಪ್ರಭಾ ದೃಷ್ಟಿ ಕುರುಡಗೇ ಕೊಟ್ಟು ಸತ್ತ ಅಶ್ವ ಎಮ್ಮೆ ಶಿಶು ಬದುಕಿಸುತಾ
ವಿಭೂ ಒಂದೆ ಮಡಕೆಯ ಪ್ರಸಾದವ ಐನೂರ್ವರಿಗೂ ಸಾಕೆನಿಸಿ ॥ ೩೨ ॥

ಸ್ತುತ್ಯಮೂರ್ತಿ ತಾ ನಾಗಸಮುದ್ರದಿ ಲಿಂಗದ ಆಲಯ ಕದ ತೆಗೆಸಿ
ಸತ್ತ ಮೊಲವನೂ ಶಬರನ ಸಹ ಶಿವಗಂಗೆಯೊಳಗೆ ತಾ ಬದುಕಿಸುತಾ
ಭಕ್ತೆ ಹೊಳಲುಗುಂದದ ಮಾಯಿದೇವಿಯ ಹರಸಿ ಯೋಗದೊಳಿದ್ದು
ಸತ್ತು ಬಿದ್ದ ಸರ್ಪವ ಬದುಕಿಸಿ ನದಿಯು ಬಿಟ್ಟ ದಾರಿಲಿ ನಡೆದು ॥ ೩೩ ॥

ಯೋಗಿ ಚಕ್ರಿ ಅಲ್ಲಿಂದ ಹೊರಟು ಎಡೆಯೂರ ಲಿಂಗಯೋಗದೊಳಿದ್ದು
ನಾಗಿಣೀ ನದಿಯಾ ಶಿಲಾಮಂಟಪದೆ ಸಿಡಿಲಪೂಜೆಯನು ಕೈಗೊಂಡು
ಯೋಗವೈರಿ ಹಲಕೂರ ಹಲ್ಲಚಿಕ್ಕನ ಮತಾಂಧತೆಯ ಕಳೆಯುತಲಿ
ಮೂಗುತಿಯ ಕದ್ದ ಮಹಿಳೆಯ ಕೈಯ ಆಗಸದ ಅಂತರಾಳದೆ ನಿಲಿಸಿ ॥ ೩೪ ॥

ಸಿದ್ಧಲಿಂಗ ಶಿವಯೋಗಿ ಲಿಂಗ ಆನಂದ ವೈಭವದೊಳಿರುತಾ
ಶುದ್ಧಬ್ರಹ್ಮ ಗುರು ಬೋಳಬಸವರಿಗೆ ಷಟುಸ್ಥಲ ಚರಿಸಿ ತೋರಿಸುತ
ಶ್ರದ್ಧೆಯು ಬಲಿಯೆ ನೂರೊಂದುಸ್ಥಲಗಳಾಚರಣೆಯಿಂದ ಉದ್ಧರಿಸಿ
ಸದ್ವಿನಯ ಬೋಳಬಸವರನು ಷಟ್‌ಸ್ಥಲಾಚಾರ್ಯರಧಿಪತಿಯೆನಿಸೀ ॥ ೩೫ ॥

ಹರ ಪರಮಗುರು ನಿರಂಜನ ಶ್ರೀ ಸಿದ್ಧಲಿಂಗ ಶಿವಯೋಗಿ
ಧರೇ ಚರಿಸಿ ಅಜ್ಞಾನ ಹರಿಸಿ ಮೌಢ್ಯವ ಕಳೆದು ಉದ್ಧರಿಸೀ
ಪರಾತ್ಪರದ ಜ್ಯೋತಿಯ ಧರೆಗೆ ಬೆಳಗಿಸೀ ಕತ್ತಲೆಯ ಹರಿಸೀ
ಸ್ಥಿರ ಜ್ಞಾನವಿತ್ತು ವಿಜ್ಞಾನ ಬಳೆಸಿದೀ ಚರಿತೆ ಕೇಳ್ದರಿಗೆ ಮಂಗಳವು ॥ ೩೬ ॥



# ಶ್ರೀ ಸಿದ್ಧಲಿಂಗ ಶಿವಯೋಗಿಗಳ ಪುಣ್ಯ ನಾಮಾವಳಿ

— ಶ್ರೀ ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿ, ಹುಬ್ಬಳ್ಳಿ.

೧ ಶಿವಧರ್ಮವೇ ಮೈದಾಳಿ ಬಂದ ಧರ್ಮಮೂರ್ತಿಯೇ ಸಿದ್ಧಲಿಂಗನೇ

೨ ಶ್ರೀ ಗೋಸಲ ಚೆನ್ನಬಸವೇಶನ ಕೃಪಾಪಾತ್ರನಾಗಿ ಷಟ್ಸ್ಥಲೋಪದೇಶದಿಂದ ಪುನೀತನಾಗಿ ಸಿದ್ಧಲಿಂಗಾಭಿಧಾನದಿಂದ ಪ್ರಕಾಶಿಸಿದಿಯಲ್ಲವೇ

೩ ಏಕೋತ್ತರಶತಸ್ಥಲಗಳಿಗೆ ನೆಲೆಯಾಗಿ ವಿರಾಜಿಸಿದ ಪ್ರಭುವೇ

೪ ಶಿವಾಚಾರವೇ ರೂಪುಗೊಂಡು ಲಿಂಗವಂತಿಕೆಯನ್ನು ಪ್ರಜ್ವಲಿಸಲು ಬಂದ ಮಹಾ ಮೂರ್ತಿಯೇ

೫ ಶ್ರೀ ಬಸವ, ಚನ್ನಬಸವ, ಅಲ್ಲಮಪ್ರಭುಗಳ ತರುವಾಯ ಲಿಂಗವಂತಿಕೆಯ ಕ್ರಿಯಾಚರಣೆ ಸ್ಫುಟಗೊಂಡು ಬೆಳಗಿದುದು ನಿನ್ನ ತಪಃಪ್ರಭಾವವಲ್ಲವೇ

೬ ಆ ಉತ್ತರೋತ್ತರ ಅಭಿವೃದ್ಧಿ ಉಗಮವೇ ಮುಂದೆ ನೂರೊಂದು ವಿರತರ ಪ್ರಕಾಶಮಾನವಾದ ಶೋಭೆಯು ಕಂಗೊಳಿಸಿತಲ್ಲವೇ ಮಹಾತ್ಮಾ

೭ ಶಿವಾನುಷ್ಠಾನಬಲದಿಂದ ಪುಣ್ಯಗರ್ಭನು ನೀನಾದುದರಿಂದ ಆಗಾಗ ಅನೇಕ ಪವಾಡಗಳು ಅನಿರೀಕ್ಷಿತವಾಗಿ ಲೀಲಾಜಾಲವಾಗಿ ಎಸೆದವಲ್ಲವೇ

೮ ನಿರಂಜನ ಪದ ಸಾರ್ಥಕನೇ ಶಿವಯೋಗ ಭೂಷಣನೇ ಅನಂತ ಸುಗುಣಪುಂಗವನೇ ಶಿವಕಾರುಣ್ಯ ಮೂರ್ತಿವಂತನೇ ಸಿದ್ಧಲಿಂಗನೇ ಪಾಹಿ

೯ ಲಿಂಗವೇ ಮನದಲ್ಲಿ ಮೂಡಿ ನಿಂತು ಸಂದಿಲ್ಲದಂತಾಗಿ ಲಿಂಗದಲ್ಲಿ ನಿಬ್ಬೆರಗಾಗುತ್ತ ಲಿಂಗದ ನೆನಹಿನಲ್ಲಿ ನಿರತನಾಗಿ ಲಿಂಗಾನಂದರಸಪರನಾಗಿ ಶಿವೈಕ್ಯಚಿತ್ತನಾಗಿ ರಮಿಪನು ಶರಣನೆಂದು ಸಾರಿದಿಯಲ್ಲವೇ

೧೦ ತಾನು – ತಾನಾಗಿ ತನ್ನನ್ನು ತಿಳಿದು ಅರಿದೆನೆಂಬುದನೆಣಿಸದೆ ಪರಮಜ್ಯೋತಿ ಎನಿಪ ಲಿಂಗದ ನೆನಹು ಮನನ ಶಿವಾನುಭವಾಮೃತದಲ್ಲಿ ಮೈಮರೆದು ಕಂಗೊಳಿಪ ಶಿವಯೋಗಿಯನು ಬಣ್ಣಿಸಲಳವೇ !

೧೧ ಆಯಾ ಉಪಾಸಕರ ಆಕಾಂಕ್ಷೆಯು ಪೂರೈಸಲೆಂದು ಸಾರತರವಾದ ಲಿಂಗವಂತಿಕೆಯು ಝಗಝಗಿಸಲೆಂದು ಅಭವನ ಸಂಕಲ್ಪವು ಫಲಿಸಲೆಂದು ಕರುನಾಡಿಗೆ ಬಿಜಯ ಮಾಡಿದ ವಿಶ್ವಚೈತನ್ಯಮೂರ್ತಿಯೆ ಸಿದ್ಧಲಿಂಗನೇ

೧೨ ಅವರವರ ಗುಣಾನುಗುಣವಾಗಿ ಆಶೀರ್ವದಿಸಿ ಸದೇಹ ಶಿವಯೋಗಸಮಾಧಿಯನ್ನಲಂಕರಿಸಿ ನಿತ್ಯತೃಪ್ತನಾಗಿ ಭಕ್ತಿಭಾವದಿ ನೆರಗೆ ಬಂದವರ ಅನುಗ್ರಹಿಸಿ ಚುಳುಕಾಗಿರುವಿಯಲ್ಲವೇ ವಿಶ್ವವಲ್ಲಭನೇ !

ಶೋಭನಂ ಭದ್ರಂ ಶುಭಂ ಮಂಗಲಂ ಶಿವಂ

# ನೂರೆಂಟು ನಾಮಾವಳಿ

— ಲಿಂಗಕವಿ.

॥ ಕಂದ ॥ ಶ್ರೀಮದನಾದಿ ನಿರಂಜನ
ಧಾಮ ಪ್ರಚುರಾಂಗಲಿಂಗ ನಿರ್ಮಾಯಾಖ್ಯಾ
ಸೋಮೇಶ ನಿಷ್ಕಲ ಪ್ರಭು
ನಾಮ ಪ್ರಾಮುಖ್ಯ ಸಿದ್ಧಲಿಂಗ ಯತೀಂದ್ರ

ಶ್ರೀ ಮಹಾನಿರಂಜನ ಪ್ರಸಿದ್ಧನಾಮ ಸಿದ್ಧಲಿಂಗ ೧
ಸೋಮಧರ ಲಲಾಮ ಜಂಗಮಾಭಿರಾಮ ಸಿದ್ಧಲಿಂಗ ೨
ಲೋಕಹಿತ ವಿಲೋಕನ ಪ್ರಚಾರ ಧೀರ ಸಿದ್ಧಲಿಂಗ ೩
ಶ್ರೀಕರಾಭಯಾನುಕೂಲ ಶೀಲಸಾರ ಸಿದ್ಧಲಿಂಗ ೪
ಚೆನ್ನಬಸವದೇಶಿಕ ಪ್ರಸನ್ನ ಕೀರ್ತಿ ಸಿದ್ಧಲಿಂಗ ೫
ಪನ್ನಗೇಂದ್ರ ಭೂಷ ಯೋಗಸಿದ್ಧಮೂರ್ತಿ ಸಿದ್ಧಲಿಂಗ ೬
ಸಾಮಗಾನಲೋಲ ಮದ್ದಯಾಲವಾಲ ಸಿದ್ಧಲಿಂಗ ೭
ಕಾಮಿಕಾದಿ ಸುಪ್ರಬುದ್ಧ ಚಿದ್ವಿಶಾಲ ಸಿದ್ಧಲಿಂಗ ೮
ತತ್ವಮಸಿ ಪದೈಕ್ಯತತ್ವಸಾರರೂಪ ಸಿದ್ಧಲಿಂಗ ೯
ಸತ್ವ ಸಕಲ ನಿಷ್ಕಲಾದಿ ಸತ್ಕಲಾಪ ಸಿದ್ಧಲಿಂಗ ೧೦
ನೀರನೆರೆದು ಸೊಡರ ಬೆಳಗಿದಮಲ ತೇಜ ಸಿದ್ಧಲಿಂಗ ೧೧
ಕಾರಣಿಕ ಪರಾವತಾರ ವೀರರಾಜ ಸಿದ್ಧಲಿಂಗ ೧೨
ಕುಂಬಳೇಶಲಿಂಗದೊಲವ ಸಲಿಸಿದೆರೆಯ ಸಿದ್ಧಲಿಂಗ ೧೩
ನಂಬಿದವರಿಗಿಂಬುದೋರಿದ ಸಹೃದಯಿ ಸಿದ್ಧಲಿಂಗ ೧೪
ಚರವೆ ಸುಪರವೆಂದು ಲಿಂಗವುಸುರಲೆಸೆದೆ ಸಿದ್ಧಲಿಂಗ ೧೫
ಚರವೆ ಜೀವವಚರಕೆಂದು ಸಾರಿ ಮೆರೆದೆ ಸಿದ್ಧಲಿಂಗ ೧೬
ಆ ತ್ರಿಯಂಬಕೇಶನಿಂಗೆ ನುಡಿಸಿದಯ್ಯ ಸಿದ್ಧಲಿಂಗ ೧೭
ಧಾತ್ರಿಯಲ್ಲಿ ಅಸಮಮಹಿಮನೆನಿಸಿದಯ್ಯ ಸಿದ್ಧಲಿಂಗ ೧೮
ಆ ಮಹಾಬಲೇಶ ಶಿರವನೇರಿದಾದ್ಯ ಸಿದ್ಧಲಿಂಗ ೧೯
ಸ್ವಾಮಿಪದದಿ ಗಂಗೆಯಿರದೆ ತೋರ್ದ ಹೃದ್ಯ ಸಿದ್ಧಲಿಂಗ ೨೦
ಜೋಗಿಜನರು ಡಂಭನೀಗುತೆರಗೆ ಪೊರೆದೆ ಸಿದ್ಧಲಿಂಗ ೨೧
ಬಾಗಿದೆನ್ನ ಬಿಂಕ ಬಿಡಿಸಿ ಕಾಯೊ ಜವದಿ ಸಿದ್ಧಲಿಂಗ ೨೨
ಮಲ್ಲಿನಾಥ ಭಕ್ತಿಯಲ್ಲಿ ನಲಿದವಾದಿ ಸಿದ್ಧಲಿಂಗ ೨೩

ಬಲ್ಲ ಭಕ್ತರಂತರಂಗದಾದಿಯೋದು ಸಿದ್ಧಲಿಂಗ ೨೪
ಶಿಲೆಯ ಬಸವಗುಣಿಸಿ ನೀರ ಕುಡಿಸಿದಸಮ ಸಿದ್ಧಲಿಂಗ ೨೫
ಫಲವದೇನು ನೀನು ನೆನೆದುದುಂಟು ಮಹಿಮ ಸಿದ್ಧಲಿಂಗ ೨೬
ಚರರ ಮೇಳವಿಡಿದು ವರಿಸಿ ಪೊರೆದೆ ಜಗವ ಸಿದ್ಧಲಿಂಗ ೨೭
ಗುರು ಪರಾತ್ಪರ ಪ್ರಭೂಪದೇಶದಿರವೆ ಸಿದ್ಧಲಿಂಗ ೨೮
ಶಬರ ರೂಪಿನಿಂದೆ ಬಂದ ಶಿವನ ಕಂಡೆ ಸಿದ್ಧಲಿಂಗ ೨೯
ಕೊಬರಿಗಾಯಿ ಮೂಸಿನೋಡಿ ಸವೆದಖಂಡ ಸಿದ್ಧಲಿಂಗ ೩೦
ಕರ್ಚಿದುರಗ ಮಡಿಯೆ ಕಂಡು ಪ್ರಾಣವಿತ್ತೆ ಸಿದ್ಧಲಿಂಗ ೩೧
ಕೊರ್ಚಿ ನುಡಿವರೆದೆಯ ಸುಚ್ಚುಕಡಿದ ಕರ್ತ ಸಿದ್ಧಲಿಂಗ ೩೨
ಕದ್ದ ಬದನೆಗಾಯಿ ಸುಡದ ಮಾಟಗೆಯ್ದ ಸಿದ್ಧಲಿಂಗ ೩೩
ಮುದ್ದುಮಾಟ ಮಾಡುವವರ ಮೂಗ ಕೊಯ್ದ ಸಿದ್ಧಲಿಂಗ ೩೪
ಸಮರದಲ್ಲಿ ಮಡಿದ ಗಂಡನುಳಿಸಿ ಪೊರೆದೆ ಸಿದ್ಧಲಿಂಗ ೩೫
ಕ್ರಮಪದಾಂಬುವ ನುಗ್ಗಿದವನ ಲಿಂಗ ತೆಗೆದೆ ಸಿದ್ಧಲಿಂಗ ೩೬
ಭೂತ ಸೇವೆಮಾಡಲವಕೆ ಮೋಕ್ಷವಿತ್ತೆ ಸಿದ್ಧಲಿಂಗ ೩೭
ಓತು ಕಾಸಿ ಕೊಟ್ಟ ಪಾಲನುಂಡೆ ಖ್ಯಾತ ಸಿದ್ಧಲಿಂಗ ೩೮
ಹೊಳಲಗುಂದ ಮಾಯಿದೇವಿ ಭಕ್ತಿಗೊಲಿದೆ ಸಿದ್ಧಲಿಂಗ ೩೯
ಹೊಳೆಯು ದಾರಿ ಕೊಡಲು ಮೈಮೆದೋರಿ ನಡೆದೆ ಸಿದ್ಧಲಿಂಗ ೪೦
ಸಿಡಿಲಿನಿಂದ ಪೂಜೆಗೊಂಡ ನೊಸಲಗಣ್ಣ ಸಿದ್ಧಲಿಂಗ ೪೧
ಮಡಿಕೆಯನ್ನ ಒಯ್ದು ನೂರಕಿತ್ತ ಚನ್ನ ಸಿದ್ಧಲಿಂಗ ೪೨
ಜೇಡಹುಳದ ಶಾಪ ದೂರಮಾಡಿ ಕಂಡೆ ಸಿದ್ಧಲಿಂಗ ೪೩
ಕಾಡಲೆಳಸಿದೂಟವಮೃತವಾಗಲುಂಡೆ ಸಿದ್ಧಲಿಂಗ ೪೪
ಸತ್ತ ಕುದುರೆ ಎಮ್ಮೆಗಳಿಗೆ ಜೀವವಿತ್ತೆ ಸಿದ್ಧಲಿಂಗ ೪೫
ಬತ್ತದಂದು ಜಲಸಮೃದ್ಧಿಮಾಡಬಲ್ಲೆ ಸಿದ್ಧಲಿಂಗ ೪೬
ತಡಿಯದೆನಗೆ ನಿನ್ನ ಕರುಣಕವಚ ತೊಡಿಸೊ ಸಿದ್ಧಲಿಂಗ ೪೭
ಹಿಡಿದ ನೇಮ ಬಿಡದ ವೀರಕಾಸಿಯುಡಿಸೊ ಸಿದ್ಧಲಿಂಗ ೪೮
ಹೆಣ್ಣು ಮಣ್ಣಿನಿಂದೆ ಕೆಡದ ಹಾದಿ ಹಿಡಿಸೊ ಸಿದ್ಧಲಿಂಗ ೪೯
ಬಣ್ಣಬಟ್ಟೆಗೆರಗದಂತೆ ಸಲಹಿ ಹರಸೊ ಸಿದ್ಧಲಿಂಗ ೫೦
ಹತ್ತುಗಾಳಿಗೊತ್ತನರಿದ ನಿತ್ಯ ನೀನು ಸಿದ್ಧಲಿಂಗ ೫೧
ಹೆತ್ತ ತಾಯಿ ತಂದೆ ಬಳಗ ನೀನೆ ಕಾಣೊ ಸಿದ್ಧಲಿಂಗ ೫೨
ಶರಣತತಿಯ ಸೇವೆಗೆನ್ನ ಬಿಡದೆ ಮಾರು ಸಿದ್ಧಲಿಂಗ ೫೩
ಪರಣಕೆಣೆಯ ನಿನ್ನ ನಿಜವ ತೋರು ತೋರು ಸಿದ್ಧಲಿಂಗ ೫೪
ಬಯಕೆಯೊದಗದಾಗಲೇಳ್ವ ಕ್ರೋಧವಳಿಯೊ ಸಿದ್ಧಲಿಂಗ ೫೫

ಜಯುದ ಸುಗ್ಗಿ ನಿನ್ನ ನೆನಹು ಮನವನೆಳೆಯೊ ಸಿದ್ಧಲಿಂಗ ೫೬
ಶಿವನೆ ಗುರುವು ಗುರುವೆ ಶಿವನು ನೀನದೆಲ್ಲ ಸಿದ್ಧಲಿಂಗ ೫೭
ಭವವ ಕಡಿಸುತೆನ್ನ ಲಿಂಗಕೊಪ್ಪಿಸಿದೆಯೊ ಸಿದ್ಧಲಿಂಗ ೫೮
ಪಾದಜಲದ ಹೊಲಬುದೋರಿ ಸೇವಿಸಿದೆಯೊ ಸಿದ್ಧಲಿಂಗ ೫೯
ಭಕ್ತರಂಗಳುಡುಗಿ ಬದುಕುವಂತೆ ಹರಸೊ ಸಿದ್ಧಲಿಂಗ ೬೦
ಮೋದದಿಂ ಪ್ರಸಾದವಿತ್ತು ಜಡವ ಕಳೆಯೊ ಸಿದ್ಧಲಿಂಗ ೬೧
ಮುಕ್ತರುಟ್ಟ ಬಟ್ಟೆದೊಳೆಯಹಚ್ಚಿ ಬೆಳೆಸೊ ಸಿದ್ಧಲಿಂಗ ೬೨
ನಿನ್ನ ಹೊತ್ತುಗೆಲಸಕೆನ್ನ ಹಚ್ಚಿಕೊಳ್ಳೊ ಸಿದ್ಧಲಿಂಗ ೬೩
ನಿನ್ನ ಮಾಟದವರ ಸೇವೆ ಭಾಗ್ಯವಲ್ತೆ ಸಿದ್ಧಲಿಂಗ ೬೪
ನೀಡಿದೆನ್ನ ಕೈಯ ತುತ್ತನುಂಡು ಸಲಹೊ ಸಿದ್ಧಲಿಂಗ ೬೫
ರೂಢಿಗರಿದು ನಿನ್ನ ಕುರುಹ ತೋರಿ ಸಲಹೊ ಸಿದ್ಧಲಿಂಗ ೬೬
ಗುರುವು ಲಿಂಗ ಜಂಗಮಾಂಘ್ರಿ ಜಲ ವಿಭೂತಿ ಸಿದ್ಧಲಿಂಗ ೬೭
ವರವೆ ಪುಣ್ಯ ನಿಕರದಿರವೆ ಪರಮಜ್ಯೋತಿ ಸಿದ್ಧಲಿಂಗ ೬೮
ಆರ್ಯರಿರವನರಿದು ಹಣ್ಣನಿರದೆ ಕೊಟ್ಟ ಸಿದ್ಧಲಿಂಗ ೬೯
ಶೌರ್ಯದಿಂದೆ ಸವಣರೆಡಗುತನವ ಸುಟ್ಟ ಸಿದ್ಧಲಿಂಗ ೭೦
ಶಿರದೊಳೆರೆದ ಪಾಲನೆಲ್ಲ ಸಲಿಸಿಕೊಂಡೆ ಸಿದ್ಧಲಿಂಗ ೭೧
ಕರದಿ ಮುಟ್ಟಿ ಭಸಿತ ಲಿಂಗವೆನಿಸಿ ಕಂಡೆ ಸಿದ್ಧಲಿಂಗ ೭೨
ಕುಸುಮವಾಟಿಯಲ್ಲಿ ಕುಶಲವಡೆದು ನಲಿದೆ ಸಿದ್ಧಲಿಂಗ ೭೩
ಹಸುವು ತೊರಿಸಿ ಕರೆಯಲೆಲ್ಲ ಸಲಿಸುತೆಸೆದೆ ಸಿದ್ಧಲಿಂಗ ೭೪
ನಂಬಿಶೆಟ್ಟಿಗಿಂಬುಗೊಟ್ಟು ನಡಿಸಿದಂದು ಸಿದ್ಧಲಿಂಗ ೭೫
ಕುಂಭಿನಿಗೆಡೆಯೂರ ಶಂಭುನಿಲಯವೆಂದೆ ಸಿದ್ಧಲಿಂಗ ೭೬
ತೋಂಟದೊಳು ಸಮಾಧಿ ಬಲಿಸಿ ನಲಿದು ಮೆರೆದೆ ಸಿದ್ಧಲಿಂಗ ೭೭
ತೋಂಟದಾರ್ಯ ನಾಮವಂದವಾಗಲೆಸೆದೆ ಸಿದ್ಧಲಿಂಗ ೭೮
ಬೋಳಬಸವ ಸಿದ್ಧವೀರನೆನಿಸಿ ಮೆರೆದೆ ಸಿದ್ಧಲಿಂಗ ೭೯
ಕೇಳಲುದ್ಧನಾರ್ಯನೆನಿಸಿ ಜನವ ಪೊರೆದೆ ಸಿದ್ಧಲಿಂಗ ೮೦
ಹರಿಹರೇಶ ಬಸವಲಿಂಗ ನಾಮವಾಂತ ಸಿದ್ಧಲಿಂಗ ೮೧
ವಿರತಿವಿಹಿತ ರಾಚ ಕೌದಿಯಾ ಮಹಾಂತ ಸಿದ್ಧಲಿಂಗ ೮೨
ಅರ್ಧನಾರಿಯರಸನೀತನೆಂದು ಮೆರೆದೆ ಸಿದ್ಧಲಿಂಗ ೮೩
ಸಾರ್ದರೊಲವನೀವನುಗ್ಗದಾರ್ಯ ನೀನೆ ಸಿದ್ಧಲಿಂಗ ೮೪
ಆ ಸದಾಶಿವಾರ್ಯ ಗುರುಮಹಾಂತದೇವ ಸಿದ್ಧಲಿಂಗ ೮೫
ಮೀಸಲ ಮುದಿತೋಂಟದಜ್ಜ ನನ್ನ ಜೀವ ಸಿದ್ಧಲಿಂಗ ೮೬
ಮೃತ್ಯುವಿಜಯ ಸಿದ್ಧದೇಶಿಕೇಂದ್ರ ಶರಣು ಸಿದ್ಧಲಿಂಗ ೮೭

ನಿತ್ಯ ಫಲದ ಸದ್ವಿರಕ್ತಚಂದ್ರ ಶರಣು ಸಿದ್ಧಲಿಂಗ ೮೮
ಭಕ್ತರಿಚ್ಛೆಗೊಡುವ ಭಕ್ತವತ್ಸಲೇಶ ಸಿದ್ಧಲಿಂಗ ೮೯
ಯುಕ್ತ ಶರಣಚಿತ್ತಕಾಶ ಮುಕ್ತಿಕೋಶ ಸಿದ್ಧಲಿಂಗ ೯೦
ಕಂದನೊಲವನರಿದು ಸಲಹು ಕಂದುಗೊರಲ ಸಿದ್ಧಲಿಂಗ ೯೧
ಮಂದತನವ ಬಿಡಿಸಿ ಪಾಲಿಸುವ ಕೃಪಾಳು ಸಿದ್ಧಲಿಂಗ ೯೨
ಪಡೆದ ಮಕ್ಕಳೊಡನೆ ನುಡಿಯದಿರ್ಪರೇನೊ ಸಿದ್ಧಲಿಂಗ ೯೩
ಹುಡುಗನೆಡಗುತವನರಿದು ಕೊಡಹಿ ಕಾಣೊ ಸಿದ್ಧಲಿಂಗ ೯೪
ಬೇಡಿದವರಿಗೆಲ್ಲ ಕಾಡದಿತ್ತೆ ನೀನು ಸಿದ್ಧಲಿಂಗ ೯೫
ಬೇಡದೆನಗೆ ಕಾಡಿ ಕರುಣಿಸೀಗ ನೀನು ಸಿದ್ಧಲಿಂಗ ೯೬
ನಿನ್ನ ಬಗೆಯ ಮಾನ್ಯವೆಂದ ಬಳಿಕದೇನು ಸಿದ್ಧಲಿಂಗ ೯೭
ಚನ್ನ ಚದುರತನವು ನಿನ್ನ ನೆನಹು ಕಾಣೋ ಸಿದ್ಧಲಿಂಗ ೯೮
ಹುತ್ತದೊಳಗೆ ಚಿತ್ತಜಾರಿಗೊತ್ತನರಿದೆ ಸಿದ್ಧಲಿಂಗ ೯೯
ಮತ್ತೆ ಬೇಡೆ ಭಕ್ತರೆಡೆಗೆ ಸಾರಿ ಪೊರೆದೆ ಸಿದ್ಧಲಿಂಗ ೧೦೦
ಕರಣವರತ ಮೌನಿ ವಿಧಿವಿಧಾನ ದಾನಿ ಸಿದ್ಧಲಿಂಗ ೧೦೧
ಶರಣ ಗಣದ ಹೊಣೆಯು ಶಾಂಭವಾಭಿಮಾನಿ ಸಿದ್ಧಲಿಂಗ ೧೦೨
ಜಯತು ಜನನ–ಮರಣರಹಿತ ವಿನುತ ವಿಜಯ ಸಿದ್ಧಲಿಂಗ ೧೦೩
ಜಯತು ಜಡವಿದೂರ ಜಯತು ವಿಲಸದಭಯ ಸಿದ್ಧಲಿಂಗ ೧೦೪
ಜಯತು ಜಯತು ಜಂಗಮಾರ್ಯ ನಿಜದ ತೂರ್ಯ ಸಿದ್ಧಲಿಂಗ ೧೦೫
ಜಯತು ಜಯತು ಯೋಗಿರಾಡ್ಗಣೇಂದ್ರವರ್ಯ ಸಿದ್ಧಲಿಂಗ ೧೦೬
ಸುಗುರು ಲಿಂಗ ಜಂಗಮಾನುರಾಗ ಭೋಗಿ ಸಿದ್ಧಲಿಂಗ ೧೦೭
ಸುಗುಣಜಾಲದಾಗು ಪೊರೆಯೊ ಬಾಗಿದೆನ್ನ ಸಿದ್ಧಲಿಂಗ ೧೦೮



# ಜಯಮಂಗಲ

ಜಯಮಂಗಲಂ ನಿತ್ಯಶುಭಮಂಗಲಂ
ಜಯ ಜಯತು ಗುರು ಸಿದ್ಧಲಿಂಗೇಶಗೆ ॥ ಪ ॥

ಪರಮ ನಿರಂಜನ ಗಣೇಶನಪರಾವತಾರಿಗೆ ।
ವರಚನ್ನಬಸವೇಶ ಕರಸಂಜಾತಗೆ ॥
ಗುರುಲಿಂಗ ಪೂಜಾಕಾಲದೊಳು ಜಲದಿಂದ ।
ಉರುಪ್ರಕಾಶದಿಂ ದೀಪನುರಿಸಿದವಗೆ ॥ ೧ ॥

ಅರುಣಾಚಲೇಶನಿಂ ವರಪಂಚತಾವಡವ ।
ಧರಣೀಶ್ವರಾದಿ ಜನರಿದಿರು ಪಡೆದ ॥
ಪರಿಪೂರ್ಣವಾಗಿ ಹರಿವ ಕಾವೇರಿ ನದಿಯಿಂದ ।
ಸುರಜನರುಘೇ ಎನಲು ದಾರಿಯನು ಪಡೆದ ॥ ೨ ॥

ಅರೆಬಂಡೆ ಕಲ್ಲಿನಲಿ ವರಪಾದದಿರುವಿನಿಂ ।
ಉರುತೀರ್ಥವನು ಸೃಜಿಸಿ ಪಾವನಗೈದವಗೆ ॥
ಗಿರಿರಾಜಸುತೆಯಾದ ಹೊಳಲುಗುಂದದ ದೇವಿ ।
ಕರದಿಂದ ಪರಿಪರಿಯ ಸೇವೆಗೊಂಡವಗೆ ॥ ೩ ॥

ಕಗ್ಗೆರೆಯ ವನದೊಳಗೆ ಹಿಗ್ಗುತಲಿ ತಪಗೈದು ।
ಉಗ್ರರೂಪದ ಹುತ್ತದಲಿ ಮೆರೆದ ॥
ಭರ್ಗರೂಪದಿ ಭಕ್ತ ನಂಬೆಣ್ಣ ಶರಣನಿಗೆ
ಶೀಘ್ರದಲಿ ವರವಿತ್ತ ಗುರುದೇವಗೆ ॥ ೪ ॥

ಎಡೆಯೂರ ಪುರದೊಡೆಯ ಕೊಡಗಿದೇವನಿಂ ।
ಕಡುಭಕುತಿಯೊಳ್ ಮಠವ ಪಡೆದು ॥
ಜಡಕಾಯದೊಡನೆ ಶಿವಯೋಗ ನಿದ್ರೆಯಲಿ ।
ಮೃಡರೂಪ ತಾನೆನಿಸಿ ಜಗವ ಪೊರೆವ ॥ ೫ ॥

# ಶುದ್ಧಾರತಿ

—ಶ್ರೀ ಘನಮಠ ಶಿವಯೋಗಿಗಳು.

ಶುದ್ಧಾರತಿ ಪಿಡಿದೆತ್ತಿರಿ ತೋಂಟದ ಸಿದ್ಧಲಿಂಗನಿಗೆ । ಭವಗೆ ॥
ಶ್ರದ್ಧೆಯಿಂದ ಅಘವಿರುದ್ಧಗೆ ಪರಮ ಪ್ರಬುದ್ಧಾರ್ಚಿತ ಪದಗೆ । ಹರಗೆ ॥ ಪ ॥

ನಿತ್ಯನಿರಂಜನ ನಿರುಪಮ ನಿರ್ಗುಣ ತತ್ತ್ವಾಕಾರನಿಗೆ । ಭವಗೆ ॥
ಸತ್ಯಜ್ಞಾನ ವಿರಾಗಭಕ್ತಿ ಭಾವೋತ್ತರೋತ್ತರಗೆ । ಹರಗೆ ॥ ೧ ॥

ಬಸವಪುರಾತನರನುಮತಿಯಿಂದುದಯಿಸಿದ ಜಾತನಿಗೆ । ಭವಗೆ ॥
ವಸುಮತಿ ಶಿಷ್ಯರಿಗಸಮಸುಭವವನು ವಶವಾಗರುಹಿದಗೆ । ಹರಗೆ ॥ ೨ ॥

ಆರು ಮೂರು ನಾಲ್ಕೀರೈದೈದಕೆ ದೂರವಾದನಿಗೆ । ಭವಗೆ ॥
ಸಾರವೀರ ಸುವಿಚಾರ ಭಕ್ತಸಂಚಾರನಾದನಿಗೆ । ಹರಗೆ ॥ ೩ ॥

ಹಮ್ಮು ಬಿಮ್ಮಳಿದ ಚಿನ್ಮಯ ಷಟ್ಸ್ಥಲ ಬ್ರಹ್ಮಾಚಾರ್ಯನಿಗೆ । ಭವಗೆ ॥
ಮರ್ಮದಿ ತನುಗುಣಧರ್ಮವಳಿದ ಪರಬ್ರಹ್ಮಮೂರುತಿಗೆ ಹರಗೆ ॥ ೪ ॥

ಭೂರಿಪದಂಗಳ ಹಾರದ ಮಹಿಮಾಪಾರಾವಾರನಿಗೆ । ಭವಗೆ ॥
ಧೀರ ಘನಮಠೋದ್ಧಾರ ಶರಣ ಮಂದಾರ ವೀರನಿಗೆ । ಹರಗೆ ॥ ೫ ॥

ಭಕ್ತಿಸುಧಾಸಾರ : ತತ್ತ್ವಪದ ॥ ೩೯ ॥ ಪ್ರ: ಶ್ರೀ ಮುರುಘಾಮಠ, ಧಾರವಾಡ. [೧೭-೧-೧೯೪೫] ಬೆಲೆ ೧-೮-೦.

# ಬೆಳಗಿರಿ

— ಶ್ರೀ ಘನಮಠ ಶಿವಯೋಗಿಗಳು.

ಗುರು ತೋಂಟದ ಸಿದ್ಧಗೆ ಬೆಳಗಿರಿ ಕ–।

ಪೂರದಾರತಿ ಜಾಣೆಯರೀಗ ... ... ॥ ಪ ॥

ಪರಮ ನಿರಂಜನನುರೆ ಚೆನ್ನಬಸವನ

ಕರದಿ ಜನಿಸಿ ಶರಣರ ಪಾಲಿಸಿದ ಶ್ರೀ ... ... ॥ ೧ ॥

ಆರಾರರಿಯದ ಮೀರಿದ ಷಟ್‌ಸ್ಥಲ

ಸಾರಾಮೃತವನು ಸೂರೆಗೊಟ್ಟಗೆ ಶ್ರೀ ... ... ॥ ೨ ॥

ಮಾಯರಹಿತ ಸುಖದಾಯ ಶ್ರೀ ಘನಮಠ–

ನಾಯಕನೇ, ಗತಿ ನೀನೆಯೆನುತ್ತ ಶ್ರೀ ... ... ॥ ೩ ॥

ಭಕ್ತಿಸುಧಾಸಾರ: ಪದ ॥ ೩೯ ॥

# ಅ ನು ಬಂ ಧ

—•—

೧ ಇಂದಿನವರು

೨ ಗುರುಪರಂಪರೆ

೩ ಸುಕ್ಷೇತ್ರ ಎಡೆಯೂರಿನ ಶಾಸನ

೪ ಸಂಪಾದನೆಯ ಪರಂಪರೆಯವರು ಕಾಣಿಸಿರುವ
ತೋಂಟದ ಶ್ರೀ ಸಿದ್ಧಲಿಂಗೇಶ್ವರರ ವಚನಗಳು

೫ ಅರ್ಥಕೋಶ

೬ ಸ್ತೋತ್ರಗಳ ಅಕಾರಾದಿ

# ಇಂದಿನವರು

ನಿನ್ನಿನವರು ಇಂದಿನವರು ನಾಳಿನವರು ಹೋದ ದಾರಿ ಒಂದಲ್ಲದೆ ಎರಡಿಲ್ಲ ನೋಡು ಎಂದನಯ್ಯ ಕಾಡಿನೊಳಗಾದ ಶಂಕರಪ್ರಿಯ ಚೆನ್ನ ಕದಂಬ ಲಿಂಗ ನಿರ್ಮಾಯ ಪ್ರಭುವೇ.

**ಟೀಕು:** ನಿನ್ನಿನವರೆಂದಡೆ ಹಿಂದಕ್ಕೆ ಕಲ್ಯಾಣನಗರವಲ್ಲಿರ್ದ ಬಸವಾದಿ ಪ್ರಮಥರು ಎಂದಡೆ ಏಳುನೂರೆಪ್ಪತ್ತು ಪ್ರಮಥಗಣಂಗಳು. ಇಂದಿನವರೆಂದಡೆ ಸಿದ್ಧೇಶ್ವರಸ್ವಾಮಿಗಳು, ಸಿಂಗಳಾಪುರದ ಬಸವರಾಜದೇವರು, ಘನಲಿಂಗದೇವರು, ಬೋಳಬಸವೇಶ್ವರಸ್ವಾಮಿಗಳು, ಶೀಲವಂತ ಚನ್ನಮಲ್ಲಯ್ಯಗಳು, ಷಣ್ಮುಖಸ್ವಾಮಿಗಳು. ಇಂತೀ ಶಿವಗಣಂಗಳು ಲಿಂಗೈಕ್ಯರಾಗಿರುವಲ್ಲಿ ಗುಪ್ತರಾಗಿರುವರು. ನಾಳಿನವರು ಎಂದಡೆ ಮರ್ತ್ಯಲೋಕದಲ್ಲಿ ಭಿನ್ನಭಕ್ತಿಯಮಾಡಿ ಸ್ವರ್ಗಲೋಕದಲ್ಲಿ ಫಲಪದವಿಯ ಪಡೆದು ಇರುವ ಪುಣ್ಯಪುರುಷರು. ಇಂತಿವರು ಮೊದಲಾದ ಶಿವಜ್ಞಾನಿಗಳು ಆರಾದಡೇನು ಶ್ರೀ ಗುರುಕಾರುಣ್ಯವ ಪಡೆದು ಲಿಂಗಾಂಗಸಂಬಂಧಿಗಳಾಗಿ ಭಿನ್ನಭಾವವಳಿದು ಅಭಿನ್ನಭಾವದಿಂದ ಆಚರಿಸುವ ಮಾರ್ಗವೇ ಮೋಕ್ಷಮಾರ್ಗ. ಇತರವಾಗಿ ಆಚರಿಸುವ ಮಾರ್ಗವೆಲ್ಲಾ ಎಂಬತ್ತುನಾಲ್ಕು ಲಕ್ಷದ ಭವಬಂಧನದ ಮಾರ್ಗವೆಂದು ಶಿಷ್ಯಂಗೆ ಶ್ರೀಗುರು ಪೇಳುತಿರ್ದನೆಂಬುದೀಗ ಈ ವಚನದ ತಾತ್ಪರ್ಯಾರ್ಥ.

— ಶ್ರೀ ಕಾಡಸಿದ್ಧೇಶ್ವರ ವಚನ.

ಐಕ್ಯನ ಪ್ರಾಣಲಿಂಗಿಸ್ಥಲ : ವಚನ ೫೬

## ಚನ್ನಬಸವೇಶ್ವರದೇವರ ಶಿಶು ಸಿದ್ಧಲಿಂಗ ನಾನಯ್ಯ !

ಅನಾದಿಗಣೇಶ್ವರನ ಶಿಷ್ಯ ಆದಿಗಣೇಶ್ವರ
ಆದಿಗಣೇಶ್ವರನ ಶಿಷ್ಯ ನಿರ್ಮಾಯನೆಂಬ ಗಣೇಶ್ವರ
ನಿರ್ಮಾಯನೆಂಬ ಗಣೇಶ್ವರನ ಶಿಷ್ಯರು ನಿರಂಜನನೆಂಬ ಗಣೇಶ್ವರ
ನಿರಂಜನನೆಂಬ ಗಣೇಶ್ವರನ ಶಿಷ್ಯರು ಜ್ಞಾನಾನಂದನೆಂಬ ಗಣೇಶ್ವರನು
ಜ್ಞಾನಾನಂದನೆಂಬ ಗಣೇಶ್ವರನ ಶಿಷ್ಯರು ಆತ್ಮಗಣೇಶ್ವರನು
ಆತ್ಮಗಣೇಶ್ವರನ ಶಿಷ್ಯರು ಅಧ್ಯಾತ್ಮಗಣೇಶ್ವರ
ಅಧ್ಯಾತ್ಮಗಣೇಶ್ವರನ ಶಿಷ್ಯರು ರುದ್ರನೆಂಬ ಗಣೇಶ್ವರ
ರುದ್ರನೆಂಬ ಗಣೇಶ್ವರನ ಶಿಷ್ಯರು ಬಸವಪ್ರಭುದೇವರು
ಬಸವಪ್ರಭುದೇವರ ಶಿಷ್ಯರು ಆದಿಲಿಂಗದೇವರು
ಆದಿಲಿಂಗದೇವರ ಶಿಷ್ಯರು ಚೆನ್ನವೀರೇಶ್ವರದೇವರು
ಚೆನ್ನವೀರೇಶ್ವರದೇವರ ಶಿಷ್ಯರು ಹರದನಹಳ್ಳಿಯ ಗೋಸಲದೇವರು
ಹರದನಹಳ್ಳಿಯ ಗೋಸಲದೇವರ ಶಿಷ್ಯರು ಶಂಕರದೇವರು
ಶಂಕರದೇವರ ಶಿಷ್ಯರು ದಿವ್ಯಲಿಂಗದೇವರು
ದಿವ್ಯಲಿಂಗದೇವರ ಶಿಷ್ಯರು ಚೆನ್ನಬಸವೇಶ್ವರದೇವರು
ಚೆನ್ನಬಸವೇಶ್ವರದೇವರ ಕರಕಮಲದಲ್ಲಿ ಉತ್ಪತ್ತಿಯಾದ ಶಿಶು
ಸಿದ್ಧಲಿಂಗನಾನಯ್ಯ
ಹೀಂಗೆ ಅನಾದಿವಿಡಿದು ಬಂದ ಗುರು, ಅನಾದಿವಿಡಿದು ಬಂದ ಲಿಂಗ,
ಅನಾದಿವಿಡಿದು ಬಂದ ಜಂಗಮ, ಅನಾದಿವಿಡಿದು ಬಂದ
ಗುರು – ಶಿಷ್ಯಸಂಬಂಧ
ಅನಾದಿವಿಡಿದು ಬಂದ ಪಾದೋದಕ ಪ್ರಸಾದ,
ಅನಾದಿವಿಡಿದು ಬಂದ ಭಕ್ತಿ ಜ್ಞಾನ ವೈರಾಗ್ಯ,
ಅನಾದಿ ಸಂಸಿದ್ಧವಾದ ವೀರಶೈವಾಚಾರ ಸಂಪತ್ತು
ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ !

ಷಟ್ಸ್ಥಲಜ್ಞಾನಸಾರಾಮೃತ. ॥ ೮ ॥

# ಸುಕ್ಷೇತ್ರ ಎಡೆಯೂರ ಮಠದ ಶಾಸನ*

೧ ಕೊಡಗಿಹಳಿಯದೇವರ್ು ತಾಲು ಪಡೆದ ಮಠದ ಭೂಮಿಯಲಿ ತೋಂಟದ ಸ್ವಾಮಿ

೨ ಗೆ ತಂಮ ಭಕ್ತಿಯಿಂದಾ ಕಟ್ಟಿಸಿಕೊಟ್ಟ ಮಠ. ಯಿ ಮಹಶಿದ್ದೇಶ್ವರನ ಆತಿಸಯವೆಂತೆಂದ

೩ ಡೆ: ಶ್ರೀಮತು ಸಚಿದಾನಂದನಿತ್ಯಪರಿಪೂರ್ಣವನುಳ್ಳ ಅನಾದಿಭಕ್ತ, ಆ ಭಕ್ತನ ಹ್ರುದಯದಲಿ ಜಂ

೪ ಗಮ, ಜಂಗಮದ ಮುಕುಟದಲ್ಲಿ ಶೂನ್ಯಲಿಂಗ, ಆ ಲಿಂಗದಲ್ಲಿ ಚಿದಂಬರ ಶಿವಶಕ್ತಿ ಪಂಚ

೫ ಶಕ್ತಿ ಪಂಚನಾದ ಪಂಚಬ್ರಂಹ ಯಿಶ್ವರಾಷ್ಟಕ ಮಹೇಶ್ವರ ಪಂಚವಿಂಶತಿ ರುದ್ರರೇಕಾ

೬ ದಶತ್ರಯವಯ ಹಿರಂಣ್ಯಗರ್ಭ ವಿರಾಟಮೂರ್ತ್ತಿ ಯಿಂತೀ ಯೆಂಭ- ತೊಂದು ಮೂರ್ತ್ತಿ

೭ ಯೆ ಅಂಗವಾಗಿರ್ಪ್ಪಾತನೆ ಅನಾದಿಭಕ್ತನು. ಆ ಭಕ್ತನ ಪ್ರಾಣಕಲಾ ಚೈತಂನ್ಯಸ್ವ

೮ ರೂಪೇ ತೋಂಟದ ಸಿದ್ಧಲಿಂಗೇಶ್ವರನು. ಆ ಸಿದ್ಧಲಿಂಗೇಶ್ವರನ ಮೂರ್ತ್ತಿ ಕ್ರಮವೆಂತೆಂದ

೯ ಡೆ: ಪ್ರಣಮವೆ ಸಿರಸಂ, ನಮಸಾ(ಸ್ಕಾ)ರವೇ ಭುಜ, ಶಿಕಾರವೇ ದೇಹ, ವಯಷ್ಕಾರವೇ ಪಾದ, ಅನಂ

೧೦ ತಕೋಟಿಬ್ರಹ್ಮಾಂಡಗಳೇ ಮಕುಟ, ಸಮಸ್ತಲೋಕಾದಿಲೋಕಂಗಳೇ ದೇಹದ ಜಳವ

೧೧ ಳೆಯ, ಆಕಾಶವೇ ಮುಖ, ದಶದಿಕ್ಕುಗಳೇ ತೋಳು, ಚಂದ್ರಸೂರ್ಯಾದಿಗಳೇ ನಯನ, ಪಾತಾಳ

೧೨ ವೇ ಹೆದೆ(ಎದೆ?), ಮೇಘಂಗಳೇ ಜಟಾಬಂಧ, ಆ ಜಟಾಬಂಧದಲ್ಲಿ ಶೂನ್ಯಲಿಂಗ, ವೇದ ಪುರಾಣಂಗಳೇ ಕ್ರೀ, ನ

೧೩ ಕ್ಷತ್ರಂಗಳೇ ಪುಷ್ಪ, ಚಂದ್ರಪ್ರಕಾಶವೇ ವಿಭೂತಿ, ಅಷ್ಟಕುಲಪರ್ವ್ವತಂಗಳೇ ರುದ್ರಾಕ್ಷಿ, ಸಪ್ತಸಮುದ್ರಂಗ

* ಶಾಸನಗಳಲ್ಲಿ ಶಿವಶರಣರು : ಡಾ॥ ಎಂ. ಎಂ. ಕಲಬುರ್ಗಿ. ಪುಟ ೧೪೧–೧೪೩

೧೪ ಳೇ ಕಮಂಡಲ, ಭುವನಸ್ರುಷ್ಟಿಏ ಕಂತೆ, ದಿವಾರಾತ್ರಿಗಳೇ ಮಠ, ಷಡು ರುತುಗಳೇ ಷಡಸ್ಥಲ, ಮಹಾಸೇ

೧೫ ಷನೇ ಕಟಿಸೂತ್ರ, ಪರಿಪೂರ್ನ್ನಜ್ಞಾನವೇ ಪಂಚಮುದ್ರೆ, ತ್ರಿಕಾಲಜ್ಞಾನವೇ ಮಹದೈಶ್ವರ್ಯ, ಮಹಾ

೧೬ ಮೇರುವೇ ದಂಡ, ಸದ್ಗುಣವೇ ಕರ್ಪರ, ಕುಲವೆ ಶಿವಕುಲ ಯಿಂತಪ್ಪ ಅನಾದಿ ಜಂಗಮವೆ

೧೭ ಜಗಹಿತಾರ್ಥವಾಗಿ ಚರಿಸಿದ ಕ್ರಮವೆಂತೆಂದರೆ: ಜ್ಞಾನಕ್ರಿಯಾಸ್ವರೂಪನು ಸರ್ವಾಂಗಲಿಂ

೧೮ ಗಿ ಷಟ್ಸ್ಥಲಜ್ಞಾನಿ ಸರ್ವಾಚಾರಸಂಪನ್ನ ಪಾದೋದಕಪ್ರಸಾದ ಪ್ರತಿಷ್ಠಾಚಾರ್ಯರು

೧೯ ಅಷ್ಟಾವರಣಾಲಂಕರಣ ದ್ವೈತಾದ್ವೈತತಿಮಿರಮಾರ್ತ್ತಾಂಡನುಂ ಯಿಂತಪ್ಪ ದಿವ್ಯಶಿವಯೋಗಿ ಸಿದಲಿ

೨೦ ಂಗೇಶ್ವರಂಗೆ ಸಂಮ್ಯಗ್ಜ್ಞಾನೋದಯವಾಗಿ ಸಂಸಾರ ಹೇಹ(ಯ)ಮಂ ಮಾಡಿ ಶರಣುಹೊಕ್ಕು ಶಿಷ್ಯಜನ

೨೧ ಗಳ ನಾಮ ಪರಿಕ್ರಮಗಳೆಂತೆಂದಡೆ: ಸಪ್ಪೆದೇವರು ಉಪ್ಪಿನಹಳ್ಳಿಯ ಸಾಮಿ ಸಿದ್ದೇದೇವರು ನಂಜೇದೇ

೨೨ ವರು ಬೋಳಬಸವರಾಜದೇವರು ಗುಂಮಳಾಪುರದ ಸಿದ್ಧಲಿಂಗದೇವರು ಪಟಣದೇವರು ರೇವ

೨೩ ಣಸಿದ್ದೇದೇವರು.ಸೀಲವಂತದೇವರು ಚಿಟ್ಟಿಗದೇವರು ಯಿಂತಿವರು ಮುಕ್ಯವಾದ ಭಕ್ತ ಮ

೨೪ ಹೇಸ್ವರರ್ಗೆ ಷಡುಸ್ತಲಜ್ಞಾನ ಲಿಂಗಾಂಗಸಂಮಂಧ ಸಮರಸ ಏಕಾರ್ತ್ಥಮಂ ಬೋಧಿಸಿ ಮುಕ್ತರಂ

೨೫ ಮಾಡಿ ಷಡುಸ್ತಲ ಯೇಕಾರ್ತವಾಗಿ ಮಾಡುವ ಕ್ರಿ(ಕ್ರೀ)ಗಳೆಲ್ಲ ನಿಷ್ಪತ್ತಿ- ಯಾಗಿ ಯೆಡೆಯೂರಲ್ಲಿ ತಮಗೆ ಕಟ್ಟಿ

೨೬ ಸಿದ ಮಟದಲ್ಲಿ ಸಿವಯೋಗಸಮಾಧಿ ಸಂನದ್ಧರಾದರು. ತೋಂಟದ ಶ್ವಾಮಿಯ ಪಾದಪದ್ಮಾರಾದಕರಾದಾ ದಾ

೨೭ ನಿವಾಸ ನಿವಾಸಿಗಳಾದ ಚೊನರಾಯವಡೆಯರು ಚೆಂನರಾಯವಡೆಯರ ಮಕ್ಕಳು ಲಿಂಗಪ್ಪವಡೆ

೨೮ ಯರು ಲಿಂಗಪ್ಪವಡೆಯರ ಮಕ್ಕಳು ಪಾದೋದಕಪ್ರಸಾದಸಂಪಂನ-
ರಾದ ಚೆಂನವೀರಪ್ಪವಡೆಯರು ಚೆಂನ

೨೯ ವೀರಪ್ಪವಡೆಯರ ಸತಿ ಪರ್ವತಂಮ್ಮ ದಂಪತಿಗಳು ತಮ್ಮ ಭಕ್ತಿಯಿಂದ
ತೋಂಟದಶ್ವಾಮಿಗೆ ಕಲ್ಲುಮಟವ ಕಟ್ಟ

೩೦ ಬೇಕೆಂದು ಚಿಟ್ಟಿಗದೇವರಿಗೆ ಪದಾರ್ತಮಂ ನಮಸ್ಕಾರಮಂ ಮಾಡಲಾಗಿ
ಭಕ್ತಿಪದಾರ್ತಮಂ ಕೈಕೊಂಡು ಯೆ

೩೧ ಡೆಯೂರಿಗೆ ಬಿಜಯಂಗೆಯಿದು ತೋಂಟದಶ್ವಾಮಿಗೆ ಕಲ್ಲುಮಟವನು
ಯೆಂಟುಜೆಡೆಯ ಬಗೆಯ ಹಿ

೩೨ ರಿಯರು ಚಿಟ್ಟಿಗದೇವರು ಕಟ್ಟಿಸಿದರು. ಯೆಡೆಯೂರು ಸ್ತಲದಲಿ
ಆದ ಕೊಡಗಿ ಮಾನ್ಯ ನಿತ್ಯಾಬಂ

೩೩ ದ ಕಾಣಿಕೆ ಸೀಮೆ ಮೇಲೆ ತಂದ ನಂದಿದೀಪದ ಕಾಣಿಕೆ ಯಿಷ್ಟು ಯಿ
ಮಟದ ಹೀರಿರು ಪಂಚಿಕಂತೆ

೩೪ ಯ ಚೆನಮಲ್ಲಿಕಾರ್ಜುನ ದೇವರದು. ಯೆಂಟುಜಡೆಯ ಬಗೆಯ ಹಿರೀರು
ಚಿಟ್ಟಿಗದೇವರು ಪ

೩೫ ಡದ ಪುರವರ್ಗವು ಸಹಮುಕದಲ್ಲಿ ಬಂದ ಕಾಣಿಕೆ ತೋಟಂದ ಶ್ವಾಮಿ
ಯ ದಾಸೋಹ

೩೬ ದ ದ್ರುವ್ಯ ಯಿ ಮಟದಲ್ಲಿ ತೋಂಟದಶ್ವಾಮಿಯ ದಾಸೋಹವನು ಚಿಟ್ಟಿಗ
ದೇವರು ಯಿ

೩೭ ಡ್ಡಿಸಿದ ಅಃಃದದಲಿ ವಡೆಯರು ಭಕ್ತರು ವಪ್ಪಿದ ಸತ್ಪುರುಸರು ಯಿ
ದಾಸೋಹವನು ಮಾ

೩೮ ಡುವರು. ಯಿ ದ್ರುವ್ಯ ತೋಂಟದಶ್ವಾಮಿಯ ದಾಸೋಹಕ್ಕೆ ಸಲುವದು
ಆರಿಗು ವರ್ಗಪಾ

೩೯ ರಂಪರಿಗೆ ಸಲ್ಲದು. ಸಜ್ಜನಸತ್ಪುರುಸರು ಯಿ ಮಟವಲಿ ಯಿ
ಪದಾರ್ಥವ ಅನು

೪೦ ಭವಿಸುವರು. ಯೀ ಮತದಲ್ಲಿ ಕಟ್ಟಿಸಿದ ಅಡಿಗೆಮನೆ ಉಗ್ರಾಣದ
ಮನೆಯೂ

೪೧ ಈ ತೋಟದ ಸ್ವಾಮಿಯ ದಾಸೋಹಕ್ಕೆ ಸಲುವದು. ಶ್ರೀ ಸಿದ್ಧೇಶ್ವರ"

## ಸಂಪಾದನೆಯ ಪರಂಪರೆಯವರು ಕಾಣಿಸಿರುವ

# ತೋಂಟದ ಶ್ರೀ ಸಿದ್ಧಲಿಂಗೇಶ್ವರರ ವಚನಗಳು

---

ನಿರಾಕಾರವೆ ಸಾಕಾರವಾಗಿ
ನಿರ್ವಿಕಾರದ ಸೋಂಕಿನ ಸೊಬಗೆ ನೆಲೆವನೆಯಾಗಿಪ್ಪಿರಿ, ಅಯ್ಯಾ.
ಆತ್ಮಜ್ಯೋತಿ ಮನೋಜ್ಯೋತಿ ಸ್ವಯಂಜ್ಯೋತಿ ಕೇವಲಪರಂಜ್ಯೋತಿ –
ಜ್ಞಾನಾನಂದಮಯ ಮಹಾಲಿಂಗ ಗುರುಶಿವಸಿದ್ಧೇಶ್ವರಪ್ರಭುವೇ* ॥ ೧ ॥

*

ಒಬ್ಬರು ಉತ್ತಮನೆಂಬರು, ಒಬ್ಬರು ಮಧ್ಯಮನೆಂಬರು, ಒಬ್ಬರು ಕನಿಷ್ಠನೆಂಬರು,
ಒಬ್ಬರು ಅಧಮನೆಂಬರು, ಒಬ್ಬರು ಕಷ್ಟನಿಷ್ಠುರಿಯೆಂಬರು,
ಎಂದಡದಕ್ಕೇನು ಯೋಗಿಗೆ ವಿನಯವೇ ಕಂಟಕವಲ್ಲವೇ?
ಲೋಕಾರ್ಥಕ್ಕೂ ಪರಮಾರ್ಥಕ್ಕೂ ವಿರುದ್ಧ ಕಾಣಾ
ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ! ‡ ॥ ೨ ॥

*

ಸದ್ರೂಪಿ ಸಂಗನ ಬಸವಣ್ಣ ನೋಡಾ
ಚಿದ್ರೂಪಿ ಚೆನ್ನಬಸವಣ್ಣ ನೋಡಾ
ಆನಂದಸ್ವರೂಪಿ ಪ್ರಭುದೇವರು ನೋಡಾ!
ಇದು ಕಾರಣ ಸದ್ರೂಪಾದ ಸಂಗನ ಬಸವಣ್ಣನೇ ಗುರು
ಚಿದ್ರೂಪಾದ ಚೆನ್ನಬಸವಣ್ಣನೇ ಲಿಂಗ
ಆನಂದಸ್ವರೂಪಾದ ಪ್ರಭುದೇವರೇ ಜಂಗಮ ನೋಡಾ!
ನಿತ್ಯ ನಿರಂಜನ ಪರವಸ್ತು ತಾನೊಂದೆ
ಮೂರು ತೆರನಾಯಿತ್ತು ನೋಡಾ
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ! ॥ ೩ ॥

ಬಸವಣ್ಣನ ಪ್ರಸಾದದಿಂದ ಭಕ್ತಿ ಜ್ಞಾನ ವೈರಾಗ್ಯ ಸಂಪನ್ನನಾದೆನಯ್ಯಾ
ಚೆನ್ನಬಸವಣ್ಣನ ಪ್ರಸಾದದಿಂದ ಷಟ್ಸ್ಥಲಜ್ಞಾನಸಂಪನ್ನನಾದೆನಯ್ಯಾ
ಪ್ರಭುದೇವರ ಪ್ರಸಾದದಿಂದ
ಪರಶಿವತತ್ತ್ವಸ್ವರೂಪೆ ಎನ್ನ ಸ್ವರೂಪೆಂದರಿದು
ಸಮಸ್ತ ಸಂಸಾರ ಪ್ರಪಂಚು ಕೊಡಹಿದೆನು ನೋಡಾ!

---

* ಸಂಪಾದನೆಯ ಸಿದ್ಧವೀರಣ್ಣದೇವರು : ಲಿಂಗಸ್ತೋತ್ರದ ವಚನಗಳು. ॥ ೪ ॥
‡ ಸಂಪಾದನೆಯ ಚನ್ನಂಜೆದೇವರು : ಆಚರಣೆಯ ವಚನ ॥ ೧೩೪ ॥

ನೀಲಲೋಚನೆಯಮ್ಮನ ಪ್ರಸಾದದಿಂದ
ನಿಜಲಿಂಗೈಕ್ಯನಾದೆನಯ್ಯಾ
ಮಹಾದೇವಿಯಕ್ಕಗಳ ಪ್ರಸಾದದಿಂದ
ಸುತ್ತಿದ ಮಾಯಾಪಾಶವ ಹರಿದು
ನಿರ್ಮಾಯನಾಗಿ ನಿರ್ವಾಣಪದದಲ್ಲಿ ನಿಂದೆನಯ್ಯಾ !
ಸಿದ್ಧರಾಮಯ್ಯನ ಪ್ರಸಾದದಿಂದ ಶುದ್ಧ ಶಿವತತ್ತ್ವವ ಹಡೆದೆನಯ್ಯಾ
ಮೋಳಿಗಯ್ಯನ ಪ್ರಸಾದದಿಂದ ಕಾಯದ ಕಳವಳವನಳಿದು
ಕರ್ಮ ನಿರ್ಮಲವಾಗಿ ವೀರಮಾಹೇಶ್ವರನಾದೆನು ನೋಡಾ !
ಇವರು ಮುಖ್ಯವಾದ ಏಳುನೂರೆಪ್ಪತ್ತಮರಗಣಂಗಳ
ಪರಮಪ್ರಸಾದದಿಂದ
ಎನ್ನ ಕರಣಂಗಳೆಲ್ಲ ಲಿಂಗಕರಣಂಗಳಾಗಿ
ಕರಣೇಂದ್ರಿಯಂಗಳ ಕಳೆದುಳಿದು
ಇಂದ್ರಿಯಂಗಳಿಗೆ ನಿಲುಕದ ಸ್ಥಾನದಲ್ಲಿರ್ದು
ಪರಮಾನಂದ ಪ್ರಭಾಮಯನಾಗಿರ್ದೆನು ನೋಡಾ !
ಇದು ಕಾರಣ ನಿಮ್ಮ ಶರಣರ ಪ್ರಸಾದದಿಂದ
ಮಹಾಪ್ರಸಾದಿಯಾಗಿರ್ದೆನು ಕಾಣಾ,
ಮಹಾಲಿಂಗಗುರುಶಿವಸಿದ್ಧೇಶ್ವರ ಪ್ರಭುವೇ ! ॥ ೪ ॥

ಶಿವಭಾವದಿಂದ ಆತ್ಮ ಹುಟ್ಟಿ
ಶಿವ ತಾನೆಂಬ ಉಭಯುವನಲಂಕರಿಸಿದನಾಗಿ
ಆತ್ಮಂಗೆ ಭಾವವೆಂಬ ಹೆಸರಾಯಿತ್ತು!
ಆತ್ಮ ಬಂದು ಆಕಾಶವ ಕೂಡಿದಲ್ಲಿ ಜ್ಞಾನವೆಂಬ ಹೆಸರಾಯಿತ್ತು.
ಆತ್ಮ ಬಂದು ವಾಯುವ ಕೂಡಿದಲ್ಲಿ ಮನವೆಂಬ ಹೆಸರಾಯಿತ್ತು.
ಆತ್ಮ ಬಂದು ಅಗ್ನಿಯ ಕೂಡಿದಲ್ಲಿ ಅಹಂಕಾರವೆಂಬ ಹೆಸರಾಯಿತ್ತು.
ಆತ್ಮ ಬಂದು ಅಪ್ಪುವ ಕೂಡಿದಲ್ಲಿ ಬುದ್ಧಿಯೆಂಬ ಹೆಸರಾಯಿತ್ತು.
ಆತ್ಮ ಬಂದು ಪೃಥ್ವಿಯ ಕೂಡಿದಲ್ಲಿ ಚಿತ್ತವೆಂಬ ಹೆಸರಾಯಿತ್ತು.
ಚಿತ್ತ ಆಚಾರಲಿಂಗವ ಧರಿಸಿಪ್ಪುದು.
ಬುದ್ಧಿ ಗುರುಲಿಂಗವ ಧರಿಸಿಪ್ಪುದು.
ಅಹಂಕಾರ ಶಿವಲಿಂಗವ ಧರಿಸಿಪ್ಪುದು.
ಮನಸ್ಸು ಜಂಗಮಲಿಂಗವ ಧರಿಸಿಪ್ಪುದು.
ಜ್ಞಾನ ಪ್ರಸಾದಲಿಂಗವ ಧರಿಸಿಪ್ಪುದು.
ಭಾವ ಮಹಾಲಿಂಗವ ಧರಿಸಿಪ್ಪುದು !

ಇಂತೀ ಭೇದವನರಿದು ಲಿಂಗವ ಧರಿಸಬಲ್ಲರಾಗಿ
ನಿಮ್ಮ ಶರಣರು ಸರ್ವಾಂಗಲಿಂಗಿಗಳಯ್ಯ!
ನಿಮ್ಮ ಶರಣ ಬಸವ ಚೆನ್ನಬಸವಣ್ಣ ಪ್ರಭು ಮುಖ್ಯವಾದ
ವೀರಶೈವ ಶಿವೈಕ್ಯರ ಬಂಟರ ಬಂಟನಾಗಿರಿಸಯ್ಯ.
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ !† ॥ ೫ ॥

*

ಎನ್ನ ರೇಚಕ ಪೂರಕ ಕುಂಭಕಗಳೆಲ್ಲವೂ
ಶಿವಮಂತ್ರಮಯುವಾಗಿ ಸಂಚರಿಸುತಿಪ್ಪವು.
ಎನ್ನ ರೇಚಕವೇ 'ನಮಃಶಿವಾಯ ನಮಃಶಿವಾಯ ನಮಃಶಿವಾಯ'
ಯೆನುತಿಪ್ಪುದು ನೋಡಾ !
ಎನ್ನ ಪೂರಕವೇ 'ಓಂ' ಎಂಬ ಪ್ರಣವಸ್ವರೂಪವಾಗಿಪ್ಪುದು.
ಎನ್ನ ಕುಂಭಕವೇ ಪರಶಕ್ತಿಮಯವಾಗಿ ಪರಂಜ್ಯೋತಿಸ್ವರೂಪಾಗಿ
ಪರಮಚಿದ್ಬ್ರಾಂಡಸ್ಥಾನವಾಗಿಪ್ಪುದು ನೋಡಾ !
"ಮಂತ್ರಮಧ್ಯೇ ಭವೇಲ್ಲಿಂಗಂ। ಲಿಂಗಮಧ್ಯೇ ಭವೇನ್ಮಂತ್ರಃ ॥
ಮಂತ್ರಲಿಂಗದ್ವಯೋರೈಕ್ಯಂ । ಇಷ್ಟಲಿಂಗಂ ತು ಶಾಂಕರೀ ॥"
ಇಂತೆಂದುದಾಗಿ.
ಎನ್ನ ರೇಚಕ ಪೂರಕ ಕುಂಭಕಸ್ವರೂಪವಪ್ಪ
ಶಿವಮಂತ್ರವೆ ಶಿವಲಿಂಗಸ್ವರೂಪಾಗಿ
ಎನ್ನ ಕರಸ್ಥಲದಲ್ಲಿ ಕರತಳಾಮಳಕವಾಗಿ ಕಾಣಲ್ಪಟ್ಟಿತು ನೋಡಾ !
ಆ ಕರಸ್ಥಲದ ಲಿಂಗವ ಕಂಗಳು ತುಂಬಿ ನೋಡಿ
ಮನಮುಟ್ಟಿ ನೆನೆದು, ಸಂದಿಲ್ಲದಿಷ್ಟಲಿಂಗದಲ್ಲಿ ಭಾವಬಲಿದು
ಲಿಂಗವನಪ್ಪಿ ಅಗಲದೆ ಆ ಲಿಂಗದಲ್ಲಿ ಸದಾ ಸನ್ನಿಹಿತವಾಗಿರ್ದು
'ಶಿವಶಿವಾ', 'ಹರಹರಾ'– ಎನುತಿರ್ದೆನಯ್ಯಾ.
ನಿಮ್ಮ ನೆನಹಿನಿಂದ ನಿಮ್ಮನೇ ನೆನೆವುತಿರ್ದೆನು ಕಾಣಾ
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ. ॥ ೬ ॥

ಮನ ಘನವಸ್ತುವಾದ ಬಳಿಕ
ಮನ ವಚನ ಕಾಯವೆಂಬ ತ್ರಿಕರಣಶುದ್ಧಾತ್ಮನೆಂಬೆ ;
ನಿತ್ಯಮುಕ್ತನೆಂಬೆ ; ನಿರಾಲಂಬಿಯೆಂಬೆ.
ಆತನ ತನು ಶುದ್ಧವಾಗಿ ತನುವೇ ಗುರು.
ಆತನ ಮನ ಶುದ್ಧವಾಗಿ ಮನವೇ ಲಿಂಗ.

† ಸಂಪಾದನೆಯ ಚನ್ನಂಜೆದೇವರು : ಮಿಶ್ರಸ್ತೋತ್ರದ ವಚನ – ೬೬, ೬೭, ೬೮.

ಆತನ ಭಾವ ಶುದ್ಧವಾಗಿ ಭಾವವೇ ಮಹಾನುಭಾವ ಚರಲಿಂಗ ನೋಡಾ!
ಇಂತೀ ಜ್ಞಾನಗುರು, ಅರುಹೆಂಬ ಶಿವಲಿಂಗ, ಮಹಾನುಭಾವವೆಂಬ ಜಂಗಮ
ಇಂತೀ ತ್ರಿವಿಧವು, ತನ್ನ ತ್ರಿವಿಧಾತ್ಮ ನೋಡಾ.
ಜ್ಞಾನಗುರುವೆಂದಡೆ ತನ್ನ ಜೀವಾತ್ಮ.
ಅರುಹೆಂಬ ಶಿವಲಿಂಗವೆಂದಡೆ ತನ್ನ ಅಂತರಾತ್ಮ.
ಮಹಾನುಭಾವ ಜಂಗಮವೆಂದಡೆ ತನ್ನ ಪರಮಾತ್ಮ.
ಇಂತೀ ತ್ರಯಾತ್ಮ ಏಕಾತ್ಮವಾದಡೆ
ಸಚ್ಚಿದಾನಂದ ನಿರಂಜನ ಪರಾತ್ಪರವಸ್ತು ನೀನೆ.
ಅಲ್ಲಿ ನಾ ನೀನೆನಲಿಲ್ಲ
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ ! ॥ ೭ ॥

ಎನ್ನರುಹೇ ನಿನ್ನರುಹಯ್ಯಾ; ನಿನ್ನರುಹೇ ಎನ್ನರುಹಯ್ಯಾ.
ಎನ್ನ ಜೀವನವೇ ನಿನ್ನ ಜೀವನವಯ್ಯಾ; ನಿನ್ನ ಜೀವನವೇ ಎನ್ನ ಜೀವನವಯ್ಯಾ.
ಎನ್ನ ಸುಖವೆ ನಿನ್ನ ಸುಖವಯ್ಯಾ; ನಿನ್ನ ಸುಖವೇ ಎನ್ನ ಸುಖವಯ್ಯಾ.
ಎನಗೆ ನಿನಗೆ ಸಂದು ಸಂಶಯವಿಲ್ಲವಯ್ಯಾ.
ಸಂದುಂಟೆಂದು ನುಡಿವುದೆಲ್ಲವೂ ಬಂಧನದ ನುಡಿ ಕಾಣಿರೋ!
ಆದಿಯಲು ಸಂದಿಲ್ಲ; ಅನಾದಿಯಲು ಸಂದಿಲ್ಲ.
ಎಂದೆಂದೂ ಸಂದಿಲ್ಲ ಶರಣ ಲಿಂಗಕ್ಕೆ.
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ. § ॥ ೮ ॥



§ ಆಕರ : ಸಂಪಾದನೆಯ ಚೆನ್ನಂಜೆದೇವರು ಸೇರಿಸಿದ 'ಎಲ್ಲಾ ಪುರಾತನರ ವಚನಾಮೃತಸಾರ.' ಚ. ಸುಂದರೇಶನ್ ಅವರ ಓಲೆಯ ಪ್ರತಿ.

# ಅರ್ಥಕೋಶ

## ೧ ಕಠಿನಶಬ್ದ – ಅರ್ಥ

(ಸಂಖ್ಯೆಗಳು ಸಂಬಂಧಿಸಿದ ಪುಟವನ್ನು ಸೂಚಿಸುತ್ತವೆ)

### ಅ

ಅಕ್ಷರ: ಶಾಶ್ವತ, ಅವಿನಾಶಿ ೬೨
ಅಕ್ಷಿಕರ್ಣ: ಹಾವು ೬೩
ಅಖರ್ವ: ಮಹಾ, ಅಗಣಿತ ೭೭
ಅಗಮ್ಯ: ನಿಲುಕದ, ಅಳವಡದ ೧೨
ಅಗ್ಗಳ: ಅಧಿಕ, ವಿಶೇಷ ೭೧
ಅರ್ಚಿ: ಪ್ರೀತಿ ೭೯
ಅಧ್ವನ್ಯ: ಪಥಿಕ ೧೪
ಅಧುನಾ: ಈಗ ೧೧
ಅನಘ: ಪಾಪವಿಲ್ಲದ ೧೪, ೧೫
ಅನಡ್ವ: ಎತ್ತು, ಹೋರಿ ೬೭
ಅನಲ: ಬೆಂಕಿ ೧೯
ಅನಾಮಯ: ಆರೋಗ್ಯಕರ ೪೯
ಅನಿಶಂ: ಯಾವಾಗಲೂ, ಸದಾ ೧೧
ಅನೀಕ: ಸಮುದಾಯ, ಗುಂಪು ೬೨
ಅನುರೋಧ: ಅನುಸರಿಸುವುದು, ಬಿನ್ನಹ ೩
ಅನುವಾಸನ: ಅನುಸರಿಸಿ ವಾಸಮಾಡುವ ೭೪
ಅನುಷಂಗ: ಸಂಬಂಧ, ಅನುರಾಗ ೬೨
ಅನೃತ: ಸುಳ್ಳು, ಅಸತ್ಯ ೭೩
ಅನ್ವಹಂ: ಪ್ರತಿದಿವಸವೂ ೭೩
ಅಬ್ದ: ಸಂವತ್ಸರ, ವರ್ಷ ೮೧
ಅಭವಾಗಮ: ಶಿವಾಗಮ; ಶಿವಸಂಬಂಧವಾದ ಶಾಸ್ತ್ರ ೬೨
ಅಭಿಧಾನ: ಹೆಸರು ೯
ಅಭಿಧೇಯ: ಹೆಸರನ್ನು ಪಡೆಯತಕ್ಕ ೯
ಅಮರ್ತ್ಯಭೂಜ: ಕಲ್ಪವೃಕ್ಷ ೮
ಅಮಳ: ನಿರ್ಮಲ ೬೨
ಅಮೇಯ: ಅಳೆಯಲಾಗದ, ಅಳತೆಗೆ ನಿಲುಕದ ೭೧
ಅರತಿ: ಅಪ್ರೀತಿ ೨
ಅರಾತಿ: ಶತ್ರು, ವೈರಿ ೯
ಅವಬೋಧ: ಜ್ಞಾನ, ತಿಳಿವು, ಎಚ್ಚರ ೯
ಅವರೋಧ: ಅಡೆ–ತಡೆ, ಅಡ್ಡಿ ೯
ಅವಾಪ್ನೋತಿ: ಪಡೆಯುತ್ತಾನೆ ೯
ಅಶನಿ: ವಜ್ರಾಯುಧ ೧೦
ಅಸು: ಪ್ರಾಣ ೭೧
ಅಹಿ: ಸರ್ಪ ೧೯
ಅಳಗೆ: ಮಡಕೆ ೬೭

### ಆ

ಆಕರ್ಣನ: ಕೇಳುವಿಕೆ, ಲಕ್ಷ್ಯಗೊಡುವಿಕೆ ೭೫
ಆಕೀರ್ಣ: ತುಂಬಿದ, ವ್ಯಾಪ್ತ ೪೯
ಆಖ್ಯೆ: ಹೆಸರು, ಪ್ರಸಿದ್ಧಿ ೪೯
ಆಢ್ಯ: ಸಮರ್ಥ ೭೦
ಆಧಿ: ಮಾನಸಿಕವ್ಯಥೆ ೭೩
ಆನತ: ಬಾಗಿದ ೪೫
ಆಮಿಷ: ಆಸೆ, ಇಚ್ಛೆ ೫೭
ಆಮ್ನಾಯ: ವೇದ ೯
ಆಶು: ಬೇಗನೆ, ಕೂಡಲೆ ೧೪
ಆಶುಗ: ಗಾಳಿ ೧೯
ಆಹ್ವಯ: ಹೆಸರು ೫

ಇ

ಇಭ: ಆನೆ ೬

ಈ

ಈಡೇ: ಸ್ತುತಿಸುತ್ತೇನೆ ೧೫

ಉ

ಉಘೆ: ಜಯಕಾರಧ್ವನಿ ೭೨

ಉತ್ಕರ: ಸಮೂಹ ೪೯

ಉತ್ತಮಾಂಗ: ಶಿರ, ಮಸ್ತಕ ೫೮

ಉತ್ತಿಷ್ಠ: ಏಳು ೩

ಉದ್ಗಮ: ಉಗಮ, ಮೂಲ ೬೭

ಉದಂಚಿತ: ಉನ್ನತ ೬೭

ಉಪಟಳ: ತೊಂದರೆ ೯೧

ಉಪಾಗತ: ಹತ್ತಿರಬಂದ ೩

ಉರುತರ: ಅತಿಶಯ, ಶ್ರೇಷ್ಠ ೫೬

ಉಸಿಕನೆ: ಸುಮ್ಮನೆ ೬೩

ಊ

ಊರ್ಜಿತ: ಉದಾತ್ತ, ಅಭಿವೃದ್ಧಿ ಹೊಂದಿದ ೬೭

ಊರೀ: ಅಂಗೀಕೃತ, ಒಪ್ಪಿರುವ ೨೮

ಋ

ಋದ್ಧ: ವೃದ್ಧಿಹೊಂದಿದ, ಬೆಳೆದ ೬೮

ೠ

ೠಕ್ಷಾಧೀಶ: ವೃಷಭವಾಹನ, ಶಿವ ೨೮

ಎ

ಎಡಗುತನ: ಉದ್ಧಟತನ, ಧಾರ್ಷ್ಟ್ಯ, ಕೀಳುಸ್ವಭಾವ ೧೦೨

ಎರೆಯ: ಸ್ವಾಮಿ ೧೦೦

ಐ

ಐದಾವೆ: ಇದ್ದಾವೆ, ಇವೆ ೫೨

ಓ

ಓದನ: ಅನ್ನ ೬೨

ಓಪ: ಪ್ರಿಯ, ಒಡೆಯ ೪೬

ಕ

ಕನತ್: ಪ್ರಕಾಶಿಸುವ ೪೯

ಕಪರ್ದಿ: ಶಿವ, ಜಡೆಮುಡಿಯುಳ್ಳವ ೮

ಕರಣ: ಇಂದ್ರಿಯ ೪೪

ಕರಬಿಲ್ವವತ್: ಅಂಗೈಬಿಲ್ವದಂತೆ ೭

ಕರಂಡ: ಭರಣಿ ೪೬

ಕಲಹಂಸ: ರಾಜಹಂಸಪಕ್ಷಿ ೩

ಕಲಾ: ಚಂದ್ರಕಲಾ ೮

ಕಲಾಪ: ಭೂಷಣ, ಸಮೂಹ ೮

ಕಾಸಾರ: ಸರೋವರ ೬೩

ಕೂಟಸಾಕ್ಷಿ: ಅಸತ್ಯವಾದಿ ೨೩

ಕೂಪ: ಬಾವಿ ೬೩

ಕೈರವ: ನೈದಿಲೆ ೪೪

ಕೊರ್ಚು: ಕೊಚ್ಚು ೧೧೧

ಕೋಳುವಿಡಿ: ಸೆರೆಹಿಡಿ ೫೨

ಕ್ಲ್ಪಪ್ತ: ಗೊತ್ತುಮಾಡಿದ, ನಿಶ್ಚಿತ ೯

ಕ್ಷುತ್ತು: ಹಸಿವೆ ೫೧

ಕ್ಷ್ವೇಡ: ವಿಷ ೧೪

ಕಂದರ್ಪ: ಮನ್ಮಥ ೧೩

ಕಂತು: ಮನ್ಮಥ ೬೪

ಕುಂಜರ: ಆನೆ ೨೫

ಕುಂದಣ: ಚೊಕ್ಕ ಚಿನ್ನ ೮೭

ಗ

ಗತವೃದ್ಧ: ವೃದ್ಧಾಪ್ಯವಿಲ್ಲದ ೬೮

ಗರಳ: ವಿಷ ೬೪

ಗಾತ್ರ: ಶರೀರ ೯

ಗುಡಿಗಟ್ಟು: ಉತ್ಸಾಹಗೊಳ್ಳು ೩೯

ಗುಲ್ಮ: ಪೊದರು ೩

ಗ್ರಾಸ: ತುತ್ತು, ಕವಳ ೫೨

ಗಂಗಾಳ: ಊಟದ ತಟ್ಟೆ ೭೨

ಘ

ಘನ: ಮೋಡ ೪೫

ಘೂರ್ಣ: ಸುಳಿಸುತ್ತುವಿಕೆ, ಹೊರಳಾಡುವಿಕೆ ೧೦

**ಚ**

ಚಕ್ಕಂದ: ಸುಮ್ಮಾನ, ಸರಸ ೯೪

ಚರಿಷ್ಣು: ಸಂಚರಣಶೀಲ ೪೯

ಚರ್ಯ: ನಡೆವಳಿ, ಶೀಲ ೪೬

ಚಾರು: ಮನೋಹರ, ರಮ್ಯ ೫೮

ಚಿದಕೂಪಾರ: (ಚಿತ್ + ಅಕೂಪಾರ) –ಜ್ಞಾನಸಮುದ್ರ ೧೮

ಚಿದ್ಯೋಷಿತ್: (ಚಿತ್ + ಯೋಷಿತ್) –ಜ್ಞಾನಾಂಗನೆ ೪೫

ಚಿರದ್ದೇಹ: ಶಾಶ್ವತಕಾಯ, ಅಮರಶರೀರ ೬೮

ಚುಳುಕಾಗು: ಕೈಹಿಡಿತಕ್ಕೆ ಸಿಗು ೯೯

ಚೋಹ: ವೇಷ, ಸೋಗು ೫೩

ಚಂದ್ರಶಾಲೆ: ಉಪ್ಪರಿಗೆಯ ಮೊಗಸಾಲೆ ೮೭

**ಜ**

ಜಡ: ಮಂದ, ಅಚೇತನ ೬೭

ಜನಿ: ಹುಟ್ಟು, ಜನನ ೫೦

ಜಿಜ್ಞಾಸು: ಜ್ಞಾನಾಪೇಕ್ಷಿ ೧೫, ೭೭

ಜೀಮೂತ: ಮೋಡ ೪೭

ಜ್ಯೋತ್ಸ್ನೆ: ಬೆಳದಿಂಗಳು ೧೧

ಜಂಬಾಲ: ಕೆಸರು, ೧೪

ಜಂಬಾಲಜಾತ: ಕಮಲ ೧೪

**ಝ**

ಝಟಿತಿ: ತಕ್ಷಣವೆ ೭

ಝಲ್ಲಿ: ತೋರಣ, ರೇಶಿಮೆ, ಗೊಂಡೆ ೮೭

ಝಂಝಾಮಾರುತ: ಬಿರುಗಾಳಿ ೪೭

**ತ**

ತರಣಿ: ಸೂರ್ಯ ೧೧

ತಳಿಗೆ: ತಟ್ಟೆ, ಎಡೆ, ಸೇಸೆ ೬೦, ೯೭

ತಾರ್ಕ್ಷ್ಯ: ಗರುಡ ೧೯

ತಾವಡ: ಸರ, ಮಾಲೆ, ಹಾರ ೭೧

ತಿಂತಿಣಿ: ಸಮೂಹ, ಗುಂಪು ೬೪

ತೂರ್ಯ: (ತುರೀಯ) ಅರಿವಿನ ಅವಸ್ಥೆ ೧೦೩

ತೂಲ: ಹತ್ತಿ, ಅರಳೆ ೧೯

ತ್ರಾಹಿ: ಕಾಪಾಡು, ರಕ್ಷಿಸು ೨೫

ತ್ರಿದಶ: ದೇವತೆ ೧೪

**ದ**

ದಶಾಂಗ: ಸುಗಂಧ ಧೂಪದ ಹುಡಿ ೩

ದಷ್ಟ: ಕಚ್ಚಿದ, ಸರ್ಪದ ಕಚ್ಚುವಿಕೆ ೬೪

ದಾಯ: ಕೊಡತಕ್ಕ ೨೧

ದಾವ: ಕಾಳ್ಗಿಚ್ಚು ೮

ದೀಪ್ತಿ: ಪ್ರಕಾಶ ೪೦

ದುರಿತ: ಪಾಪ ೭೬

ದುರ್ಭರ: ಭರಿಸಲಾಗದ, ಸಹಿಸಲಸಾಧ್ಯ ೯೪

ದುಷ್ಕರ: ಅಸಾಧ್ಯ, ಕಠಿನ ೭೩

ದುಸ್ತರ: ದಾಟಲಾಗದ ೭೩

ದ್ರೋಣಕುಸುಮ: ತುಂಬೆ ಹೂ ೭೧

ದಾಂತಿ: ದಮನ, ಸಂಯಮ ೩

ದುಃಖಾಪಹ: ದುಃಖವನ್ನು ಅಪಹರಿಸುವಂಥದು ೭೧

**ಧ**

ಧನಂಜಯ: ಅಗ್ನಿ ೧೨

ಧಾಮ: ನೆಲೆ, ಕಾಂತಿ ೪೯

ಧಿಷಣಾ: ಬುದ್ಧಿ, ಪ್ರಜ್ಞೆ ೨೫

ಧೂತ: ಕಳಚಿಹಾಕಿದ, ತೊಳೆದ ೧೮

ಧೇನು: ಹಸು, ಆಕಳು ೭೬

**ನ**

ನತಜನೌಘ: ಬಾಗಿದ ಜನಸಮೂಹ ೪೭

ನಾಗ: ಆನೆ ೧೯
ನಾರಿಕೇಳ: ತೆಂಗಿನಕಾಯಿ ೬೧
ನಿಕಾಮಂ: ಯಥೇಚ್ಛವಾಗಿ, ಇಚ್ಛೆ ೪
ನಿಕೃತ್ತ: ಖಂಡಿತ ೯
ನಿತರಾಂ: ಅತ್ಯಂತ ೧೫
ನಿರ್ಭಾವ: ಲೌಕಿಕ ಭಾವನೆಯಿಲ್ಲದ ೩
ನಿರಂಜನ: ಪರಿಶುದ್ಧ ೩
ನಿರವದ್ಯ: ದೋಷರಹಿತ ೪೬
ನಿರಸ್ತ: ತೆಗೆದುಹಾಕಿದ, ನಾಶಗೈದ,
ಇಲ್ಲದ, ತೊಲಗಿಸಿದ ೬೭
ನಿರಾಕುಳ: ಕ್ಲೇಶವಿಲ್ಲದ,
ತೊಂದರೆಯಿಲ್ಲದ ೩
ನಿರಾಮಯ: ರೋಗವಿಲ್ಲದ, ನಿರ್ಮಲ ೩೧
ನಿರಾಲಂಬ: ಆಧಾರವಿಲ್ಲದ,
ಆಶ್ರಯವಿಲ್ಲದ,
ಅವಲಂಬನವಿಲ್ಲದ ೩
ನಿರಾವರಣ: ಆವರಣರಹಿತ,
ಮಾಯಾರಹಿತ ೪೬
ನಿರಾಳ: ನಿಷ್ಕಲ, ನಿರಾಕಾರ ೭೮
ನಿವಹ: ಗುಂಪು ೫೭
ನಿರ್ವಯಲು: ಆತ್ಯಂತಿಕಬಯಲು,
ಬ್ರಹ್ಮ, ಪರವಸ್ತು ೭೨
ನಿರ್ವೇಶವಾಸ: ವಸ್ತ್ರರಹಿತ,ದಿಗಂಬರ ೪೬
ನಿಶಾಂತ: ಮನೆ, ನೆಲೆ ೫
ನಿಸ್ತಂದ್ರ: ಎಚ್ಚರ, ಜಾಗೃತಿ ೩
ನಿಹಿತ: ಇರಿಸಿದ, ಇಟ್ಟ ೭೬
ನೀರಾಜನ: ಆರತಿ ೩
ನೆಗಹು: ಮೇಲಕ್ಕೆತ್ತು ೭೧
ನೇಮ: ನಿಯಮ, ವ್ರತ ೧೦೧

ಪ

ಪಡುಗ < ಪತದ್ಗ್ರಹ;
ಪಡಿಗ, ಪೀಕದಾನಿ ೫೫

ಪತತ್ರಿ: ಹಕ್ಕಿ ೩
ಪತಂಗ: ಸೂರ್ಯ ೬೭
ಪದುಳ: ಹದುಳ, ಕ್ಷೇಮ ೬೫
ಪರತರ: ಶ್ರೇಷ್ಠ ೫
ಪರದಾರಘ್ನಂ: ಪರಸ್ತ್ರೀಯರ
ಶೀಲಭಂಗಮಾಡಿದವನು ೨೧
ಪರಮನಿರ್ವಾಣ: ಕೇವಲಸ್ಥಿತಿ,
ಜೀವ ದೇವನೊಡನೆ ಬೆರೆದು
ಏಕವಾಗುವ ಸ್ಥಿತಿ ೩೮
ಪರಿಚರ್ಯೆ: ಸೇವೆ, ಪೂಜೆ ೭೫
ಪರಿಚ್ಛಿನ್ನ: ಕತ್ತರಿಸಿದ ೯
ಪರಿದೃಷ್ಟು ಕಾಮಾಃ : ನೋಡಲು
ಇಚ್ಛೆಯುಳ್ಳವರು ೩
ಪರಿಭವ: ಸಂಸಾರ, ಅಪಮಾನ ೭೩
ಪರಿವ್ರಾಟ್: ಸಂನ್ಯಾಸಿ. 'ಪರಿತ್ಯಜ್ಯ
ಸರ್ವಂ ವ್ರಜತೀತಿ ಪರಿವ್ರಾಟ್' ೮
ಪರಿವೇಷ್ಟಿಸು: ಸುತ್ತುವರಿ ೭೬
ಪರಿಷೆ: ಜಾತ್ರೆ ೬೨
ಪರ್ವ: ಹಬ್ಬ ೬೩
ಪವಾಡ: ಅದ್ಭುತಕಾರ್ಯ ೬೫, ೬೯
ಪಾಟಿ: ಕ್ರಮ, ರೀತಿ ೫೩
ಪಾಯಾತ್: ಕಾಪಾಡಲಿ, ರಕ್ಷಿಸಲಿ ೫
ಪಿನದ್ಧ: ಮುಸುಕಿದ, ಮುಚ್ಚಿದ ೬೮
ಪಿಪಾಸೆ: ದಾಹ ೫೧
ಪಿಶುನತ್ವ: ಚಾಡಿಕೋರತನ ೨೨
ಪೀಯೂಷ: ಅಮೃತ, ಹಾಲು ೭೫
ಪೂತ: ಪವಿತ್ರ, ಪರಿಶುದ್ಧ ೨೪
ಪೂರ: ಪ್ರವಾಹ ೪೫
ಪೋಟಮನ: ಪೋಕರಿಮನಸ್ಸು ೫೩
ಪ್ರಣೀತ: ರಚಿತ; ಕೃತ ೮
ಪ್ರತ್ಯಯ: ಜ್ಞಾನ, ವಿಶ್ವಾಸ ೪೯
ಪ್ರಥಿತ: ಪ್ರಸಿದ್ಧ, ಪ್ರಖ್ಯಾತ ೬

ಪ್ರಭೂಮ: ವಿಸ್ತಾರ, ಅಧಿಕ ೪೯
ಪ್ರಮಥ: ಶಿವಗಣ ೨೦
ಪ್ರರುಚಿ: ಘನಶಿವತೇಜ; ಒಳ್ಳೆಯ ಕಾಂತಿ ೬೭
ಪ್ರವೃದ್ಧ: ವಿಶೇಷ ಬೆಳವಣಿಗೆಯನ್ನು ಪಡೆದಿರುವ ೭೭
ಪ್ರಸೂನ: ಹೂ, ಫಲ ೭೨
ಪ್ಲವ: ತೆಪ್ಪ, ದಾಟಲು ಸಾಧನ ೨೪

**ಬ**

ಬಣಗು: ಅಲ್ಪ, ಕೀಳು ೫೩
ಬಣಬೆ: ಹುಲ್ಲಿನ ರಾಶಿ, ಮೆದೆ ೫೩
ಬಾಢಂ: ನಿಶ್ಚಯ ೧೫
ಬಿನುಗು: ಆಡಂಬರ, ಹೀನ ೫೨
ಬಿನ್ನಾಣ: ಸೊಬಗು, ವಿಜ್ಞಾನ ೮೭
ಬಿಮ್ಮು: ಸೊಕ್ಕು, ಗರ್ವ ೧೦೫

**ಭ**

ಭಸ್ಮದಿಗ್ಧಾಂಗ: ವಿಭೂತಿಯಿಂದ ಲೇಪಿತವಾದ ಅಂಗವುಳ್ಳವನು ೧೭
ಭಸಿತ ಘಟಿಕೆ: ವಿಭೂತಿಯ ಭರಣಿ; ಘಟ್ಟಿ ೬೧
ಭಾಗಧೇಯ: ಅದೃಷ್ಟ, ಭಾಗ್ಯ ೨೧
ಭಿಷಜ: ವೈದ್ಯ ೨೧
ಭೂರಿ : ಘನ ೧೩, ೧೦೫
ಭೃತ: ತುಂಬಿದ, ಧರಿಸಿದ ೮
ಭುಜಂಗ: ಸರ್ಪ, ತಪಸ್ವಿ ೫೦
ಭೋ: ಎಲೈ ೨೫
ಭ್ರಾಂತಂ: ಹೊಳೆವ ೪೯

**ಮ**

ಮಜ್ಜನ: ಸ್ನಾನ ೬೩
ಮರುದ್ಗಣ: ದೇವತಾಗಣ ೧೦
ಮಸ್ತಕ: ಶಿರಸ್ಸು ೯೭
ಮಹ್ಯಂ: ನನಗೆ ೨೫
ಮಿಲತ್: ಕೂಡಿದ ೮
ಮುಕ್ತ–ಕ: ಜೀವನ್ಮುಕ್ತ; ಮುತ್ತುಗದ ಮರ ೬೭

**ಯ**

ಯಜನ: ಯಾಗ ೧೪
ಯಮಿ: ಯತಿ ೪೫
ಯೂಥ: ಹಿಂಡು, ಗುಂಪು ೪೬

**ರ**

ರಸೆ: ಭೂಮಿ ೮೨
ರಾವ: ಧ್ವನಿ ೩
ರುಂದ್ರ: ವಿಸ್ತಾರ ೪೬

**ಲ**

ಲವಿತ್ರ: ಕುಡುಗೋಲು ೪೬
ಲಸತ್: ಹೊಳೆವ, ಶೋಭಿಸುವ ೬೭
ಲುಠಂತಂ: ಹೊರಳುವಿಕೆ, ಜಾರುವಿಕೆ ೨೨

**ವ**

ವಲ್ಮೀಕ: ಹುತ್ತ ೧೩
ವಸಂತಸಖಾಹಿತ: ವಸಂತಸಖ+ಅಹಿತ —ಮನ್ಮಥನವೈರಿ; ಶಿವ, ೭೪
ವಹಿಲ: ಬೇಗ ೫೮
ವಹ್ನಿ: ಬೆಂಕಿ ೪
ವಾಟಿ: ತೋಟ, ಆವರಣ ೧೦೨
ವಾರಿಜ: ಕಮಲ ೬೭
ವಿಜಿತಕೀನಾಶ: ಯಮನನ್ನು ಗೆದ್ದವನು ೪೬
ವಿತತ: ವಿಸ್ತಾರ ೬೮
ವಿತಾನ: ಮೇಲ್ಕಟ್ಟು, ಸಮೂಹ ೬೩
ವಿತ್ತ: ಧನ ೨೧
ವಿದ್ಯೋತಿತ: ಪ್ರಕಾಶಿತ ೧೧
ವಿಭು: ಪ್ರಭು, ವ್ಯಾಪಕ ೫
ವಿರಿಂಚಿ: ಬ್ರಹ್ಮ ೫೭
ವೃಜಿನಾಚಲಸ್ವರು: ಪಾಪವೆಂಬ ಪರ್ವತಕ್ಕೆ ವಜ್ರಾಯುಧ ೪೭
ವ್ರಾತ: ಗುಂಪು ೪೯

ಶ

ಶಮನ: ಶಾಂತ ೬೮

ಶಮನಾಂತಕ: ಅಂತಕಾಂತಕ ೧೪

ಶರಣ: ರಕ್ಷಕ ೧೦೫

ಶರ್ವ: ಈಶ್ವರ ೪೪

(ಭವ–ಶರ್ವ–ಈಶಾನ–ಪಶುಪತಿ–
ರುದ್ರ–ಉಗ್ರ–ಭೀಮ–ಮಹಾದೇವ
–ಇವು ಶಿವನ ಅಷ್ಟಾಭಿಧಾನಗಳು)

ಶಾಕ್ವರಪತಿ: ವೃಷಭಪತಿ, ಶಿವ, ೪೬

ಶಿಖಿ: ಜ್ಯೋತಿ, ತೇಜಸ್ಸು ೧೧

ಶಂಬ: ವಜ್ರ ೧೯

ಶಂಬರ: ಜಲ ೧೨

ಷ

ಷಡ್ದ್ವಿಷತ್ತೂಲಾನಲ:
ಷಟ್ + ದ್ವಿಷತ್ + ತೂಲ + ಅನಲ
ಅರಿಷಡ್ವರ್ಗವೆಂಬ ಅರಳೆಗೆ ಬೆಂಕಿ ೧೯

ಸ

ಸದನ: ಮನೆ ೮೪

ಸದ್ಮ: ನಿಕೇತನ, ನೆಲೆ ೧೮

ಸನ್ನದ್ಧ: ಸಿದ್ಧ ೬೮

ಸಬ್ಬ: ಸರ್ವ ೭೧

ಸಮಂಚತ್: ಚೆನ್ನಾಗಿ ಪ್ರಕಾಶಿಸುವ,
ಬೆಳಗುವ ೮

ಸವಣ < ಶ್ರಮಣ. ಜೈನಸಂನ್ಯಾಸಿ ೧೦೨

ಸಹಕಾರ: ಮಾವು, ಸಹಾಯ
(ಸಹಕಾರೌ ಅತಿ ಸೌರಭಃ) ೬೭

ಸಾರ್ಥ: ಅನ್ವರ್ಥ ೬೭

ಸುಘೃಣಾ: ದಯೆ, ಕಾರುಣ್ಯ, ಕರುಣೆ ೧೮

ಸುಜ್ಞ: ಒಳ್ಳೆಯಜ್ಞಾನಿ, ಪಂಡಿತ ೬೪

ಸುಧೀಃ: ಜ್ಞಾನಿ, ವಿಬುಧ ೪

ಸೂಕರ: ಹಂದಿ ೫೪

ಸೂನೃತಬದ್ಧ: ಸತ್ಯಯುತ ೬೮

ಸೇಕ: ಸಿಂಪಡಿಸುವಿಕೆ ೧೨

ಸ್ಥಿರಂಜೀವಿ: ನಿತ್ಯಜೀವಿ ೫೦

ಸ್ಫುರದ್ಧಂಸಃ: (ಸ್ಫುರತ್ + ಹಂಸಃ)
ಆತ್ಮಸ್ವರೂಪಿ; ಪರಮಯೋಗಿ ೫

ಸ್ಫೀತ: ವಿಸ್ತೃತ ೯

ಸ್ರಜಂ: ಮಾಲಾ, ಮಾಲಿಕೆ ೧೨

ಸಂಕಾಶ: ಪ್ರಕಾಶ ೪೬

ಸಂಕ್ರುದ್ಧ್ಯ: ಕೋಪಯುಕ್ತನಾದ ೧೨

ಸಂಜ್ಞಾಂಕಿತ: ಹೆಸರಿಸಿದ, ಗುರುತಿಸಿದ ೪೯

ಸಂತ್ರಸ್ತ: ಬಹಳವಾಗಿ ಭೀತಗೊಂಡ ೯೪

ಸಂದಣಿಸು: ಒಟ್ಟುಗೂಡು,
ಗುಂಪುಗೂಡು ೮೭

ಸಂದೋಹ: ಸಮೂಹ ೨೨

ಸಂವಿದ್ರೂಪ: ಆತ್ಮಜ್ಞಾನಸ್ವರೂಪ ೪೭

ಸಂಸರಣ: ಸಂಸಾರ ೪೬

ಹ

ಹಮ್ಮು: ಅಹಂಕಾರ,
ನಾನು ಎಂಬ ಭಾವ ೧೦೫

ಹಾರು: ಬಯಸು, ನಿರೀಕ್ಷಿಸು ೧೦೫

ಹಿಟ್ಟುಗುಟ್ಟು: ಪುಡಿಮಾಡು ೬೪

ಹಿಮಕೃದ್ಧರ: (ಹಿಮಕೃತ್ + ಧರ)
ಚಂದ್ರಧರ, ಶಿವ ೬೮

ಹುಯ್ಯಲು: ಮೊರೆ ೫೬

ಹೃಚ್ಛಯ್ಯ: ಹೃದಯತಲ್ಪವುಳ್ಳವ
(ತಲ್ಪ–ಹಾಸಿಗೆ) ೪೬

ಹೃಷೀಕಚಯ: ವಿಷಯೇಂದ್ರಿಯಗಳ
ಸಮೂಹ ೪೯

ಹೊಗರು: ಕಾಂತಿ ೭೯

ಹೊಡಗೆಡೆ: ಉದ್ದಕ್ಕೆಬೀಳು,
ನಮಸ್ಕರಿಸು, ಸಾಷ್ಟಾಂಗವೆರಗು ೭೨

## ೨. ಸಂಜ್ಞಾರ್ಥ

**ಈಷಣತ್ರಯ ೨೭, ೬೪**

ಪ್ರಮುಖವಾದ ಮೂರು ಅಪೇಕ್ಷೆಗಳು: ದಾರೇಷಣ, ಪುತ್ರೇಷಣ, ವಿತ್ತೇಷಣ.

**ತ್ರಿಕರಣ ೪೦**

ಕಾಯ, ವಾಕ್, ಮನಸ್ಸು.

**ಮಲತ್ರಯ ೩೪**

ಆಣವಮಲ, ಮಾಯಾಮಲ, ಕಾರ್ಮಿಕಮಲ.

**ಕ್ಲೇಶಪಂಚಕ ೬೪**

ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ.

**ಪಂಚಾಚಾರ ೨೭**

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ

**ಪಂಚಯೋಗ ೯೧**

ಮಂತ್ರಯೋಗ, ಹಠಯೋಗ, ಲಯಯೋಗ, ರಾಜಯೋಗ, ಶಿವಯೋಗ.

**ಪಂಚಪುರುಷ ೮೮**

ಮನಪುರುಷ, ದೃಷ್ಟಿಪುರುಷ, ಭಾವಪುರುಷ, ಹಸ್ತಪುರುಷ, ವಾಕ್ಪುರುಷ.

**ಪಂಚವಿಷಯ ೫೨**

ಶಬ್ದ, ಸ್ಪರ್ಶ, ರೂಪ, ರಸ, ಗಂಧ.

**ಪಂಚಸಂಜ್ಞೆ ೪೯**

ಪರ, ಗೂಢ, ಶರೀರಸ್ಥ, ಲಿಂಗಕ್ಷೇತ್ರ, ಅನಾದಿ.

**ಷಟ್ಸ್ಥಲ ೨೭**

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ.

**ಷಡಧ್ವ ೮**

೧ ವರ್ಣ ೨ ಪದ ೩ ಮಂತ್ರ ೪ ಭುವನ ೫ ಕಲಾ ೬ ತತ್ತ್ವ

ಷಡ್ಲಿಂಗ ೪೧

ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ.

ಷಡ್ದ್ವಿಷಕ್ (ಅರಿಷಡ್ವರ್ಗ) ೧೯

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ.

ಸಪ್ತವ್ಯಸನ ೫೨

ದ್ಯೂತ, ಮಾಂಸಭಕ್ಷಣ, ಸುರಾಪಾನ, ವೇಶ್ಯಾಗಮನ, ಪರಸ್ತ್ರೀಗಮನ, ಮೃಗಯಾ, ಚೌರ್ಯ.

ಅಷ್ಟಮದ ೧೯

ಕುಲ, ಯೌವನ, ಸ್ತ್ರೀ, ಅನ್ನ, ಧನ, ವಿದ್ಯಾ, ಉದ್ಯೋಗ ಮತ್ತು ರೂಪ-ಎಂಬ ಮದಗಳು.

ಅಷ್ಟವಿಧಾರ್ಚನೆ ೩೧

ಜಲ, ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ.

ಅಷ್ಟಾವರಣ ೨೭, ೮೯

ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ.

ಅಷ್ಟಸಿದ್ಧಿ ೬

ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ.

ನವಚಕ್ರ ೩೪

ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ, ಬ್ರಹ್ಮ, ಶಿಖಾ, ಪಶ್ಚಿಮಚಕ್ರ,

ನವಗ್ರಹ ೩೪

ರವಿ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು.

ನವಲಿಂಗ ೨೯

ಆಚಾರಲಿಂಗ – ಗುರುಲಿಂಗ – ಶಿವಲಿಂಗ – ಜಂಗಮಲಿಂಗ – ಪ್ರಸಾದಲಿಂಗ – ಮಹಾಲಿಂಗ – ನಿಷ್ಕಲಲಿಂಗ – ನಿಶ್ಶೂನ್ಯಲಿಂಗ – ನಿರಂಜನಲಿಂಗ.

ದಶವಾಯು ೫೨

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ.

**ದಶವಿಧ ಪಾದೋದಕ ೨೭**

೧ ಗುರು ೨ ಲಿಂಗ ೩ ಜಂಗಮ ಪಾದೋದಕ ೪ ಸ್ಪರ್ಶನೋದಕ ೫ ಅವಧಾನೋದಕ ೬ ಆಪ್ಯಾಯನೋದಕ ೭ ಹಸ್ತೋದಕ ೮ ಪರಿಣಾಮೋದಕ ೯ ನಿರ್ನಾಮೋದಕ ೧೦ ಸತ್ಯೋದಕ.

**ಏಕಾದಶಪ್ರಸಾದ ೨೭**

೧ ಶುದ್ಧಪ್ರಸಾದ ೨ ಸಿದ್ಧಪ್ರಸಾದ ೩ ಪ್ರಸಿದ್ಧಪ್ರಸಾದ ೪ ಆಪ್ಯಾಯನ ಪ್ರಸಾದ ೫ ಸಮಯಪ್ರಸಾದ ೬ ಪಂಚೇಂದ್ರಿಯ ವಿರಹಿತಪ್ರಸಾದ ೭ ಅಂತಃಕರಣಚತುಷ್ಟಯವಿರಹಿತಪ್ರಸಾದ ೮ ಪ್ರಸಾದಿಯ ಪ್ರಸಾದ ೯ ಸದ್ಭಾವಪ್ರಸಾದ ೧೦ ಸಮತಾಪ್ರಸಾದ ೧೧ ಜ್ಞಾನಪ್ರಸಾದ.

**ಷೋಡಶೋಪಚಾರ ೩೧**

೧ ಅರ್ಘ್ಯ ೨ ಪಾದ್ಯ ೩ ಆಚಮನ ೪ ಪತ್ರ–ಪುಷ್ಪ ೫ ರುದ್ರಾಕ್ಷಿಮಾಲೆ ೬ ಗಂಧ ೭ ಅಕ್ಷತೆ ೮ ಛತ್ರ ೯ ಚಾಮರ ೧೦ ವ್ಯಜನ ೧೧ ಗೀತ ೧೨ ವಾದ್ಯ ೧೩ ನರ್ತನ ೧೪ ಪ್ರದಕ್ಷಿಣೆ ೧೫ ನಮಸ್ಕಾರ ೧೬ ಸ್ತೋತ್ರ.

**ಏಕೋತ್ತರ ಶತಸ್ಥಲ ೨೭**

ಪಿಂಡಸ್ಥಲದಿಂದ ಮೊದಲ್ಗೊಂಡು ಜ್ಞಾನಶೂನ್ಯಸ್ಥಲದವರೆಗೆ ಇರುವ ೧೦೧ ಸ್ಥಲಗಳು.

**ಷೋಡಶೋತ್ತರ ದ್ವಿಶತಸ್ಥಲ ೨೭**

೨೧೬ ಸ್ಥಲ. ಗೂಢವಾಗಿರತಕ್ಕ ಪರಾತ್ಪರಚೈತನ್ಯವನ್ನು ಸ್ವಯಾನುಭವಕ್ಕೆ ತಂದುಕೊಳ್ಳುವುದೇ ಶಿವಯೋಗದ ರಹಸ್ಯ. ೨೧೬ ಸ್ಥಲಸಂಬಂಧದ ಯೋಗಾನುಭವವನ್ನು ಶ್ರೀ ಸರ್ಪಭೂಷಣಶಿವಯೋಗಿಗಳವರು ತಮ್ಮ ಕೈವಲ್ಯ ಪದವೊಂದರಲ್ಲಿ ಸಾಂದ್ರವಾಗಿ ಸುಂದರವಾಗಿ ಸೂಚಿಸಿದ್ದಾರೆ:

"ಮಂಗಳ ಜಯ ಜಯ ಮಂಗಳ ಜಯ
ಮಂಗಳ ಗುರುಸಿದ್ಧ ಯತಿರಾಜಗೆ ॥ ಪ ॥

ಗುರುದತ್ತ ಪರವೊಂದೆ । ದ್ವಿತ್ರಿ ಷಟ್‌ತ್ರಿಂಶ–
ದುರು ಷೋಡಶೋತ್ತರದ್ವಿಶತಮಾಗೆ ।
ಕರ ಮನ ಭಾವದೊ । ಳುರಿ ಕರ್ಪುರಗಳಂತೆ
ಬೆರೆದಿಹ ಗುರುಸಿದ್ಧಯತಿರಾಜಗೆ."

— ಕೈವಲ್ಯಕಲ್ಪವಲ್ಲರಿ.

# ಸ್ತೋತ್ರಗಳ ಅಕಾರಾದಿ

# ಒಪ್ಪೋಲೆ

| ತಪ್ಪು | ಒಪ್ಪು | ಪುಟ | ಪಂಕ್ತಿ |
|---|---|---|---|
| ಪರಿಶ್ರೋತು ಮಾಯನ್ | ಪರಿಶ್ರೋತುಮಾಯಾನ್ | ೪ | ೬ |
| ಸ್ವಿಕೃತ್ಯಾಲಂ | ಸ್ವೀಕೃತ್ಯಾಲಂ | ೧೪ | ೮ |
| ಜಡಧೀಷಣಂ | ಜಡಧಿಷಣಂ | ೨೫ | ೧೧ |
| ಋಕ್ಷಾಧೀಶ ಮಹೇಶ (?) | ಋಕ್ಷಾಧೀಶಮಹೇಶ | ೨೮ | ೪ |
| ಮಹೋತ್ಸವಗಂಳುಂ | ಮಹೋತ್ಸವಂಗಳಂ | ೪೮ | ೪ |
| ವಿಂಚಿ | ವಿರಿಂಚಿ | ೫೭ | ೭ |
| ಸೂಜ್ಞ | ಸುಜ್ಞ | ೭೪ | ೧೯ |
| ಕವಿಜನಕಾಂತಿ/೫೭ | ಕವಿಜನಕಾಂತಿ/೭೫ | ೭೫ | |
| ಚಿರವಸಂತ ಸಖಾಹಿತಾಮರ | ಚಿರವಸಂತಸಖಾಹಿತಾಮರ | ೭೪ | ೪ |
| ಅಬ್ಧ | ಅಬ್ದ | ೮೧ | ೫ |
| ಮಣಜಪುರ | ವಣಜಪುರ | ೯೬ | ೨೧ |

## ಶ್ರೀ ಸಿದ್ಧಲಿಂಗೇಶ್ವರ ಪಂಚಶತಮಾನೋತ್ಸವ ಸಮಿತಿ

೧೮, ಜಯದೇವ ವಿದ್ಯಾರ್ಥಿನಿಲಯ, ಬೆಂಗಳೂರು – ೯

---

## ನಮ್ಮ ಪ್ರಕಟನೆಗಳು

| | | | ಬೆಲೆ |
|---|---|---|---|
| 1) | ಶ್ರೀ ಸಿದ್ಧಲಿಂಗೇಶ್ವರ ಚಾರಿತ್ರ | . . | ೨ – ೦೦ |
| 2) | ,, ಭಕ್ತಿಸಾರ | . . | ೦ – ೫೦ |
| 3) | ,, ಸಹಸ್ರನಾಮ | . . | ೧ – ೦೦ |
| 4) | ,, ಅಷ್ಟೋತ್ತರ | . . | ೦ – ೨೫ |
| 5) | ,, ನುಡಿಪರುಷ | . . | ೦ – ೨೫ |
| 6) | ,, ಸ್ತೋತ್ರಸಾಹಿತ್ಯ | . . | ೪ – ೫೦ |
| 7) | Life sketch of Siddhalingeshwara | (English | 0 – 50 |
| 8) | — ,, — | (Tamil) | 0 – 25 |
| 9) | 108 Selected Vachanas of ,, | (English) | 2 – 00 |
| 10) | 108 ,, ,, ,, | (Marathi) | 2 – 00 |

### ಪ್ರಕಟನೆಗೆ ಸಿದ್ಧವಾಗಿರುವ ಗ್ರಂಥಗಳು

೧೦೮ ವಚನಗಳು ತೆಲುಗು ೧೦೮ ವಚನಗಳು ತಮಿಳು

,, ಕನ್ನಡ ,, ಹಿಂದಿ

ಹೇರಂಬಕವಿಯ ಸಿದ್ಧಲಿಂಗ ಚಾರಿತ್ರ (ಸಾಂಗತ್ಯ)

ಚನ್ನವೀರಜಂಗಮದೇವರ ಷಟ್ಸ್ಥಲ ವಲ್ಲಭ (ಚಂಪೂ)

ವಿರಕ್ತ ತೋಂಟದಾರ್ಯರ ಸಿದ್ಧಲಿಂಗೇಶ್ವರ ಶತಕ (ವೃತ್ತ)

ಸಟೀಕ ಸಿದ್ಧೇಶ್ವರವಚನಗಳು

ಮಾಗಡಿ ವೀರಪ್ಪಶಾಸ್ತ್ರಿಗಳ ಸಿದ್ಧಲಿಂಗೇಶ್ವರ ಶತಕ

ಪದಪ್ರಯೋಗ ಕೋಶ (Concordance)

ಪ್ರಶಸ್ತಿ ಸಂಪುಟ

## ಪ್ರಚಾರ ಸಾಹಿತ್ಯ

ಭಗವಾನ್ ಸಿದ್ಧಲಿಂಗೇಶ್ವರರ ನೂತನ ಸುಂದರ ಚಿತ್ರಪಟ

" — " — ಪಿಂಗಾಣಿ ವಿಗ್ರಹ

" — " — ಪ್ಲಾಸ್ಟಿಕ್ ಮೂರ್ತಿ

" — " — ಲೋಹದ ಪದಕ, ಇತ್ಯಾದಿ.

ದೊರೆಯುವ ಸ್ಥಳಗಳು :

(1) ಎಡೆಯೂರು ಸಿದ್ಧಲಿಂಗೇಶ್ವರ ಪಂಚಶತಮಾನೋತ್ಸವ ಸಮಿತಿ
೧೮, ಜಯದೇವ ವಿದ್ಯಾರ್ಥಿನಿಲಯ, ಶೇಷಾದ್ರಿರಸ್ತೆ ಬೆಂಗಳೂರು-560009

ಮತ್ತು

(2) ಕಲ್ಯಾಣಭವನ, ಚಿಕ್ಕಪೇಟೆ, ಬೆಂಗಳೂರು-2ಎ
ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾಸಂಘ, ಎಡೆಯೂರು, ಜಿ॥ ತುಮಕೂರು

## ಈ ಗ್ರಂಥವನ್ನು ಕುರಿತು . . .

ಶ್ರೀಮಾನ್ ಚ. ಸುಂದರೇಶನ್, ಎಂ.ಎ., ಇವರು ಈಗಾಗಲೇ ದೃಷ್ಟಿಯೋಗ, ಅಭಿನವ ಅಲ್ಲಮ ಮೊದಲಾದ ಸದ್ಗ್ರಂಥಗಳನ್ನು ರಚಿಸಿ, ಪ್ರಕಟಿಸಿ ಕನ್ನಡಿಗರ ಆದರಕ್ಕೆ ಪಾತ್ರರಾಗಿರುವರು . . . ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯಮಹತ್ವವನ್ನು ಸಮುಚಿತವಾದ ರೀತಿಯಲ್ಲಿ ಈ ಸಂಪಾದಕರು ನಿರೂಪಿಸಿದ್ದಾರೆ. ಇವರ ಲೇಖನಕಾರ್ಯ ಸ್ತುತ್ಯವಾಗಿರುವುದು.

ಆಸ್ಥಾನವಿದ್ವಾನ್, ಸರ್ವದರ್ಶನತೀರ್ಥ

**ಶ್ರೀ ವೈ. ನಾಗೇಶಶಾಸ್ತ್ರಿಗಳವರು.**

*

'ಶ್ರೀ ಸಿದ್ಧಲಿಂಗೇಶ್ವರ ಸ್ತೋತ್ರಸಾಹಿತ್ಯ' ವನ್ನು ಸಂಪಾದಿಸಿ ಸಿದ್ಧಪಡಿಸಿರುವ ರೀತಿಯಲ್ಲಿ ಇವರ ಶ್ರಮ ಹಾಗೂ ಶ್ರದ್ಧೆ ಎದ್ದು ಕಾಣುತ್ತಿವೆ. ಎಲ್ಲೆಲ್ಲೋ ಚದುರಿ ಹೋಗಿದ್ದ ಸ್ತೋತ್ರಗಳನ್ನು ಸಂಗ್ರಹಿಸಿ ಅನುಕ್ರಮವಾಗಿ ವ್ಯವಸ್ಥೆಗೊಳಿಸಿರುವ ರೀತಿ, ಸ್ತೋತ್ರಗಳಿಗೆ ಪ್ರೇರಣೆ ನೀಡಿರಬಹುದಾದ ಶರಣರ ವಚನಗಳನ್ನು ಅಲ್ಲಲ್ಲಿ ಅಡಿಟಿಪ್ಪಣಿಗಳಲ್ಲಿ ಸೂಚಿಸಿರುವುದರ ಔಚಿತ್ಯ, ಸ್ತೋತ್ರ-ಸಾಹಿತ್ಯವನ್ನು ಕುರಿತು ಬರೆದಿರುವ ಉಪಯುಕ್ತವಾದ ಮುನ್ನುಡಿ, ಕವಿ–ಕೃತಿಗಳ ಬಗೆಗೆ ಸಿದ್ಧಪಡಿಸಿರುವ ಟಿಪ್ಪಣಿಗಳು, ಅನುಬಂಧರೂಪವಾಗಿ ಅವರು ಕೊಟ್ಟಿರುವ ಅರ್ಥಕೋಶ ಇತ್ಯಾದಿಗಳು – ಶ್ರೀ ಸುಂದರೇಶನ್ ಅವರು ಸಂಪಾದನಾ ಕಾರ್ಯವನ್ನು ಎಷ್ಟು ಅಚ್ಚುಕಟ್ಟಾಗಿ ಮಾಡಬಲ್ಲರೆಂಬುದಕ್ಕೆ ಸಾಕ್ಷಿಯಾಗಿವೆ.

ಶ್ರೀ ಸಿದ್ಧಲಿಂಗಯತಿಗಳ ಐದನೆಯ ಶತಮಾನೋತ್ಸವದ ಸಂದರ್ಭವಲ್ಲಿ ಅವರನ್ನು ಕುರಿತ ಸ್ತೋತ್ರಗಳನ್ನು ಹೀಗೆ ಸಂಪಾದಿಸಿ, ಶ್ರದ್ಧೆಯಿಂದ ತಮ್ಮ ವಿದ್ವತ್ ಕೈಂಕರ್ಯವನ್ನು ಸಲ್ಲಿಸುತ್ತಿರುವ ಶ್ರೀ ಚ. ಸುಂದರೇಶನ್ ಅವರನ್ನು ನಾನು ಅಭಿನಂದಿಸುತ್ತೇನೆ.

**ಡಾ॥ ಜಿ. ಎಸ್. ಶಿವರುದ್ರಪ್ಪ,** ಎಂ. ಎ., ಪಿ ಎಚ್. ಡಿ.